# ಯಾವುದು ನಿಜವಾದ ಜ್ಞಾನ?

ಯಾವುದು ನಿಜವಾದ ಜ್ಞಾನ

ಯಾವುದು ನಿಬಂಧನೆ ಜ್ಞಾನ

ಯಾವುದು ಮತಾತೀತ ಜ್ಞಾನ

ಯಾವುದು ಆಚರಣ ಜ್ಞಾನ

ಯಾವುದು ದೇವರ ಜ್ಞಾನ

ಯಾವುದು ಶಾಸ್ತ್ರೀಯ ಜ್ಞಾನ

ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (೮೮) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ಯಾವುದು ನಿಜವಾದ ಜ್ಞಾನ?


ಗ್ರಂಥಕರ್ತ : **ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 39 ಪ್ರಥಮ ಮುದ್ರಣ : ಏಪ್ರಿಲ್–2017

ಪ್ರತಿಗಳು : 1000 **ಬೆಲೆ. 85/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೇಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ದ್ಯಾನ - ಪ್ರಾರ್ಥನೆ - ನಮಾಜ್



04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಗ್ರಾಹಿತ ಶಕ್ತಿ
121. ಭೌತಿಕಮು – ಅಭೌತಿಕಮು
122. ದೇವುನಿ ಆಜ್ಞ ಮರಣಂ
123. ಮತ ಸಾಮರಸ್ಯಂ
124. ಮೋಕ್ಷಮು – ಮೋಸಮು
125. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ** : ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635, 7619545963, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ) Cell :9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾನಗರ, ತೋಣಚಿಕೊಪ್ಪಲ್, ಮೈಸೂರ್
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಪ್ರಕಾಶ್ ರೆಡ್ಡಿ**
ಸೆಲ್:9845656774,9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಯಾವುದು ನಿಜವಾದ ಜ್ಞಾನ ?



ಪ್ರಪಂಚದಲ್ಲಿ ಹನ್ನೆರಡು ಮತಗಳಿದ್ದರೂ, ಯಾರ ಮತ ಅವರಿಗೆ ದೊಡ್ಡದಾಗಿ ಕಾಣಿಸುತ್ತಿದ್ದರೂ, ಯಾರ ಮತವನ್ನು ಅವರು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರೂ, ಈ ದಿನ ಎಲ್ಲ ಮತಗಳಿಗಿಂತ ದೊಡ್ಡ ಮತಗಳು ಮೂರೇ ಇವೆ. ಅವುಗಳೇ ಒಂದು ಹಿಂದೂಮತ, ಎರಡು ಕ್ರೈಸ್ತಮತ, ಮೂರು ಇಸ್ಲಾಮ್ ಮತ. ಈ ಮೂರು ದೈವ ವಿಧಾನದ ಪ್ರಕಾರ ಮತಗಳು ಅಲ್ಲದಿದ್ದರೂ, ಪ್ರಜೆಗಳೆಲ್ಲರೂ ಮತಗಳನ್ನೇ ಹೇಳಿಕೊಳ್ಳುತ್ತಿದ್ದಾರೆ. ಮೂರು ಮತಗಳಲ್ಲಿ ಮೂರು ಗ್ರಂಥಗಳಿರುವುದರಿಂದ, ಆ ಗ್ರಂಥಗಳ ಹೆಸರುಗಳು ಬೇರೆಬೇರೆಯಾಗಿ ಇರುವುದರಿಂದ, ಆ ಮೂರು ಗ್ರಂಥಗಳು ಬೇರೆಬೇರೆ ಕಾಲಗಳಲ್ಲಿ ಹೇಳಲ್ಪಟ್ಟಿರುವುದರಿಂದ, ಗ್ರಂಥಗಳನ್ನನುಸರಿಸಿ, ಅವು ಹುಟ್ಟಿದ ಕಾಲವನ್ನನುಸರಿಸಿ, ಅವುಗಳ ಹೆಸರುಗಳನ್ನನುಸರಿಸಿ ಎಲ್ಲರೂ ಮೂರು ಮತಗಳೆಂದೇ ಹೇಳುತ್ತಿದ್ದಾರೆ.

ಮತ ಎನ್ನುವ ಹೆಸರು ಕಲಿಯುಗದಲ್ಲಿ ಮಾತ್ರ ಕೇಳಿಸುತ್ತಿದೆ ಆದರೆ, ಉಳಿದ ಕಳೆದುಹೋದ ಮೂರು ಯುಗಗಳಲ್ಲಿ ಎಲ್ಲೂ ಇಲ್ಲ. ಸೃಷ್ಠಿ ಆದಿಯಲ್ಲಿ ದೇವರು ಆಕಾಶವಾಣಿ ಮೂಲಕ ತನ್ನ ಜ್ಞಾನವನ್ನು ತಿಳಿಸುವುದು ನಡೆದಿದೆ. ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ, ಆದ್ದರಿಂದ ನೇರವಾಗಿ ದೇವರು ಹೇಳದಂತೆ ಆಕಾಶದ ಮೂಲಕ ಏರ್ಪಟ್ಟಿರುವ ಶಬ್ದದಿಂದ ಹೇಳಿಸಿದ್ದಾನೆ. ಹಾಗೆ ಹೇಳುವುದಕ್ಕೆ ಕಾರಣ, ದೇವರು ತನ್ನ ಧರ್ಮವನ್ನು ಅತಿಕ್ರಮಿಸದಂತೇ ಹೇಳಿದ್ದಾನೆಂದು ತಿಳಿಯುತ್ತಿದೆ. ದೇವರ ಪ್ರಾಥಮಿಕ ಧರ್ಮದ ಪ್ರಕಾರ **ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು**. ಈ ಧರ್ಮಗಳ ಪ್ರಕಾರ ದೇವರು ತಾನು ಸ್ವತಃವಾಗಿ ಜ್ಞಾನವನ್ನು ಹೇಳದಂತೆ, ತನ್ನ ಪ್ರಕೃತಿಯಲ್ಲಿ ಭಾಗವಾದ ಆಕಾಶದಿಂದ ಹೇಳಿಸಿದ್ದಾನೆ. ಹಾಗೆ ಹೇಳಿದ ಜ್ಞಾನ ದೇವರು ಸೃಷ್ಠಿಸಿದ ಸೃಷ್ಠಿಗಿಂತ ಬೇರೆಯಾಗಿ ಇರುವುದರಿಂದ ಅದಕ್ಕೆ **"ಜಪರ"** ಜ್ಞಾನ ಎಂದು ಹೆಸರು ಇಡುವುದು ನಡೆದಿದೆ. 'ಜ' ಎಂದರೆ ಹುಟ್ಟಿರುವುದೆಂದೂ, 'ಪರ' ಎಂದರೆ ಬೇರೆಯಾಗಿ ಇರುವುದೆಂದು ಅರ್ಥ. ದೇವರು ಸೃಷ್ಠಿಸಿದ ಸೃಷ್ಠಿ ಎಲ್ಲವೂ ಪ್ರಕೃತಿಯೊಂದಿಗೆ ಕೂಡಿಕೊಂಡಿರುವಾಗ, ದೇವರು ಹೇಳಿದ ಜ್ಞಾನ ಪ್ರಕೃತಿಗಿಂತ ಬೇರೆಯಾಗಿ ಇರುವುದರಿಂದ, ಸೃಷ್ಠಿ ಆದಿಯಲ್ಲಿ ದೇವರು

ಹೇಳಿದ ಜ್ಞಾನಕ್ಕೆ "ಜಪರ" ಎನ್ನುವ ಹೆಸರು ಬಂದಿದೆ. "ಜಪರ" ಎನ್ನುವ ಹೆಸರು ಮೊದಲ ಯುಗವಾದ ಕೃತಯುಗದಲ್ಲಿ ಅಂದಿನ ಜ್ಞಾನಿಗಳೆಲ್ಲರಿಗೂ ತಿಳಿದಿತ್ತು. ನಂತರ ತ್ರೈತಾಯುಗದಿಂದ (ತ್ರೇತಾಯುಗದಿಂದ) ಆ ಹೆಸರು ಕಣ್ಮರೆಯಾಗುತ್ತಾ ಬಂದಿದೆ. ದ್ವಾಪರಯುಗದ ಕೊನೆಯಲ್ಲಿ ಆ ಹೆಸರು ಪೂರ್ತಿ ತಿಳಿಯದಂತೆ ಹೋಗಿದೆ. ಈದಿನ ಕಲಿಯುಗದಲ್ಲಿ ನಾವು ಆ 'ಜಪರ' ಎನ್ನುವ ಹೆಸರು ಹೇಳಿದರೇ, ಕೇಳಿದವರು ಅದೇನು? ತಿನ್ನುವುದಾ, ಕುಡಿಯುವುದಾ! ಎಂದು ಕೇಳುತ್ತಿದ್ದಾರೆ.

ದ್ವಾಪರಯುಗದ ಕೊನೆಯಲ್ಲಿ ಭೂಮಿಮೇಲೆ ಜ್ಞಾನ ಬರವಾಗಿ ಹೋಗಿದೆಯೆಂದೂ, ಅಧರ್ಮಗಳು ವಿಜೃಂಭಿಸಿ, ಧರ್ಮಗಳಿಗೆ ಮುಪ್ಪು ಬಂದಿದೆಯೆಂದು ತಿಳಿದ ದೇವರು, ಭಗವಂತನೆನ್ನುವ ಮಾರುವೇಷದಿಂದ ಭೂಮಿಮೇಲೆಗೆ ಬಂದು, ಪುನಃ ದೈವಜ್ಞಾನವನ್ನು ತಿಳಿಸಿ ಧರ್ಮಗಳನ್ನು ನೆಲೆಗೊಳಿಸಿ ಹೋಗಿದ್ದಾನೆ. ಹಾಗೆ ಬಂದಿರುವ ದೇವರು ಭಗವಂತನಾಗಿ ಮನುಷ್ಯರಿಗೆ ಕಾಣಿಸಿ, ತಾನು ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಪುನಃ ಈಗ ಹೇಳುತ್ತಿದ್ದೇನೆಂದು ಹೇಳಿದ್ದಾನೆ. ಆದರೇ ಆಗ "ಜಪರ" ಜ್ಞಾನವನ್ನು ಹೇಳುತ್ತಿದ್ದೇನೆಂದು ಹೇಳಲಿಲ್ಲ. ಆದ್ದರಿಂದ ಕೃತಯುಗದಲ್ಲಿ ತಿಳಿಯದಂತೆ ಹೋದ ಹೆಸರು ಇಲ್ಲಿಯವರೆಗು ತಿಳಿಯದಂತೆ ಹೋಗಿದೆಯೆಂದೇ ಹೇಳಬಹುದು. ಯಾವಾಗಲೋ ಮೊದಲ ಯುಗದಲ್ಲಿ ತಿಳಿಯದಂತೆ ಹೋದ 'ಜಪರ' ಎನ್ನುವ ಹೆಸರೊಂದಿಗೆ ನಮಗೇನು ಕೆಲಸ? ಹಾಗೆ ಕೃತಯುಗದಲ್ಲಿ ದೈವಜ್ಞಾನಕ್ಕೆ ಒಂದು ಹೆಸರಿರುವಾಗ, ದ್ವಾಪರ ಯುಗದಲ್ಲಿ ಭಗವಂತನಾಗಿ ದೇವರು ಜ್ಞಾನವನ್ನು ಹೇಳುವಾಗ 'ಜಪರ' ಎನ್ನುವ ಆ ಹೆಸರನ್ನು ಏಕೆ ಹೇಳಲಿಲ್ಲ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ.

ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಜ್ಞಾನಕ್ಕೆ 'ಜಪರ' ಎನ್ನುವ ಹೆಸರಿರುವುದು ವಾಸ್ತವವೇ! ಆದರೇ ಆ ಹೆಸರನ್ನು ಜ್ಞಾನವನ್ನು ಹೇಳಿದ ದೇವರು (ಭಗವಂತನು) ಹೇಳಲಿಲ್ಲ. ಜ್ಞಾನವನ್ನು ತಿಳಿದುಕೊಂಡ ಜ್ಞಾನಿಗಳು ಇಟ್ಟಿರುವ ಹೆಸರು. ಆದ್ದರಿಂದ ದ್ವಾಪರ ಯುಗದಲ್ಲಿ ಭಗವದ್ಗೀತೆಯನ್ನು

ಬೋಧಿಸಿದ ಭಗವಂತನಾದ ಕೃಷ್ಣನು ಆ ಹೆಸರನ್ನು ಹೇಳದಂತೆ ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವನ್ನು ಈಗ ಹೇಳುತ್ತಿದ್ದೇನೆಂದು ಹೇಳಿದ್ದಾನೆ. ತಾನು ಹೇಳದ ಹೆಸರನ್ನು ತಾನೇ ಆಗ ಹೇಳುವುದು ಅವಶ್ಯಕವಿಲ್ಲವೆಂದುಕೊಂಡಿದ್ದಾನೋ ಏನೋ! ಆದರೇ ದೇವರೇ ಬಿಟ್ಟುಹಾಕಿದ ಪದವನ್ನು ಅಥವಾ ಹೆಸರನ್ನು ಈಗ ನೀವು ಏಕೆ ಹೇಳುತ್ತಿದ್ದೀರೆಂದು? ಅದರೊಂದಿಗೆ ನಮಗೇನು ಅವಶ್ಯಕ ವೆಂದು? ಕೆಲವರು ಕೇಳುತ್ತಿದ್ದಾರೆ. ದೇವರು ಮೊದಲು ತನ್ನ ಜ್ಞಾನವನ್ನು ಸಂಪೂರ್ಣವಾಗಿ ಹೇಳಿದ್ದಾನೆ (ಹೇಳಿಸಿದ್ದಾನೆ). ಆಗ ತಾನು ಹೇಳಿದ ಜ್ಞಾನಕ್ಕೆ ಹೆಸರು ಇಡಲಿಲ್ಲ. ಅದರ ರುಚಿಯನ್ನು ನೋಡಿದವರು ಅದಕ್ಕೆ ತಕ್ಕ ಹೆಸರು ಇಡಬಲ್ಲರೆಂದು ಆ ಕೆಲಸವನ್ನು ದೇವರು ಪ್ರಜೆಗಳಿಗೇ ಬಿಟ್ಟಿದ್ದಾನೆ. ಒಬ್ಬ ರೈತ ಬೆಳೆಸಿದ ಧಾನ್ಯವನ್ನು ಮಾರುಕಟ್ಟೆಯಲ್ಲಿ ಮಾರಿದ ನಂತರ ಪ್ರಜೆಗಳು ಧಾನ್ಯವನ್ನು ತಿಂದು ರುಚಿ ನೋಡಿ ಧಾನ್ಯ ಒಳ್ಳೆಯವಾದರೇ ಒಳ್ಳೆಯವೆಂದೋ, ಕೆಟ್ಟವಾದರೆ ಕೆಟ್ಟವೆಂದೋ ಹೆಸರು ಇಡುತ್ತಾರೆ. ಧಾನ್ಯವೊಂದರ ವಾಸ್ತವಿಕ ರುಚಿಯನ್ನು ಧಾನ್ಯ ತಿಂದವರು ಹೇಳಬೇಕಾಗಿದ್ದೇ ಆದರೆ ಧಾನ್ಯವನ್ನು ಕೊಟ್ಟವನು ಹೇಳುವುದಿಲ್ಲ. ಹಾಗೆಯೇ ತನ್ನ ಜ್ಞಾನವನ್ನು ಕುರಿತು ದೇವರು ಪ್ರಜೆಗಳ ನಿರ್ಣಯಕ್ಕೇ ಬಿಟ್ಟಿದ್ದಾರೆ. ಆ ದಿನ ದೇವರ ಜ್ಞಾನವನ್ನು ತಿಳಿದ ಜ್ಞಾನಿಗಳು ಜ್ಞಾನವೊಂದರ ಸಾರಾಂಶವನ್ನು ತಿಳಿದವರಾಗಿ, ಅದು ಪ್ರಕೃತಿಗಿಂತ ಬೇರೆಯಾದುದಾಗಿ ಇರುವುದರಿಂದ, ಸೃಷ್ಠಿಸಿರುವುದಕ್ಕಿಂತ ಬೇರೆಯಾಗಿದ್ದು ಸೃಷ್ಠಿ ರಹಸ್ಯವನ್ನು ತಿಳಿಸುವ ಜ್ಞಾನವಾಗಿ ಇರುವುದರಿಂದ ಅದಕ್ಕೆ "ಜಪರ" ಜ್ಞಾನ ಎಂದು ಹೆಸರಿಟ್ಟಿದ್ದಾರೆ. ಆಗ ದೇವರು ತಿಳಿಸಿದ ಜ್ಞಾನವೊಂದರ ಪ್ರತ್ಯೇಕತೆ ತಿಳಿದುಹೋಗಿದೆ. ನಂತರ ಭೂಮಿ ಮೇಲೆ ಪ್ರಜೆಗಳ ಮಧ್ಯದೊಳಗೆ ಎಷ್ಟೋ ಜ್ಞಾನಗಳು ದೇವರ ಹೆಸರೇ ಇಟ್ಟುಕೊಂಡು ಬಂದಿವೆ. ಆದರೇ 'ಜಪರ' ಜ್ಞಾನಕ್ಕಿಂತ ಎಲ್ಲಾ ಕಡಿಮೆ ಸ್ಥಾಯಿಯಲ್ಲಿರುವವೇ ಎಂದು ತಿಳಿದುಹೋಗಿದೆ. ಉದಾಹರಣೆ ಯಾಗಿ ಒಂದು ವಿಷಯವನ್ನು ಹೇಳಿಕೊಳ್ಳೋಣ.

ಪೂರ್ವದಲ್ಲಿ ಸುಮಾರು ಅರವತ್ತು (60) ವರ್ಷಗಳ ಕೆಳಗೆ ಕೆಲವು ವಿಧಗಳ ಬತ್ತ, ಅವುಗಳ ಅಕ್ಕಿ ಇದ್ದವು. ಅದರಲ್ಲಿ ಒಂದು 'ಚೆನ್ನಂಗಿ' ಅಕ್ಕಿ

ಎನ್ನುವ ಒಂದು ವಿಧ ಅಕ್ಕಿಯಿದ್ದವು. ಆಗ ಇದ್ದ ಸುಮಾರು ಹತ್ತು ವಿಧಗಳ ಅಕ್ಕಿಗಳಲ್ಲಿ ಎಲ್ಲಾ ಬೆಳ್ಳಗಿದ್ದರೇ ಚೆನ್ನಂಗಿ ಅಕ್ಕಿ ಕೆಂಪು ಬಣ್ಣದಲ್ಲಿ ಇದ್ದವು. ಹಾಗೆಯೇ ಎಲ್ಲ ವಿಧಗಳ ಅಕ್ಕಿಗಿಂತಲೂ ಸ್ವಲ್ಪ ದಪ್ಪವಾಗಿದ್ದು, ನೋಡುವುದಕ್ಕೆ ಒರಟಾಗಿ ಇದ್ದವು. ದಪ್ಪವಾಗಿ, ಕೆಂಪಾಗಿದ್ದರೂ ಚೆನ್ನಂಗಿ ಅಕ್ಕಿ ನೋಡುವುದಕ್ಕೆ ಚೆನ್ನಾಗಿ ಕಾಣಿಸದಿದ್ದರೂ, ಅನ್ನ ಮಾಡಿದರೆ ಅನ್ನ ಕೆಂಪಾಗಿ ಕಾಣಿಸಿದರೂ, ರುಚಿಯಲ್ಲಿ ಮಾತ್ರ ಎಲ್ಲ ಅಕ್ಕಿಗಳಿಗಿಂತ ಚೆನ್ನಾಗಿರುತ್ತಿದ್ದವು. ಯಾವ ಸಾಂಬಾರಿಗಾದರೂ ಅನ್ನ ರುಚಿಯಾಗಿ ಇರುತ್ತಿತ್ತು. ಬಹಳ ಮಂದಿ ಚೆನ್ನಂಗಿ ಅಕ್ಕಿಯನ್ನು ಬಾಯಲ್ಲಿ ಹಾಕಿಕೊಂಡು ತಿನ್ನುತ್ತಿದ್ದರು. ಕೆಲವು ಮಂದಿ ರುಚಿಯಾಗಿ ಇರುತ್ತವೆಂದು ನೀರಿನಲ್ಲಿ ನೆನೆಸಿಟ್ಟುಕೊಂಡು ಜಗಿದು ತಿನ್ನುತ್ತಿದ್ದರು. ಎಲ್ಲ ವಿಧಗಳ ಅಕ್ಕಿಗಳಲ್ಲಿ ಚೆನ್ನಂಗಿ ಅಕ್ಕಿ ಒಳ್ಳೆಯ ಹೆಸರನ್ನು ಸಂಪಾದಿಸಿಕೊಂಡಿದೆ. ಚೆನ್ನಂಗಿ ಅಕ್ಕಿ ಚೆನ್ನಾಗಿವೆಯೆಂದು ಅಕ್ಕಿಯನ್ನು ಸೃಷ್ಠಿಸಿದ ದೇವರು ಹೇಳಲಿಲ್ಲ. ಆ ಅಕ್ಕಿಯನ್ನು ತಿಂದ ಮನುಷ್ಯರು ಹೇಳಿದ್ದಾರೆ. ಅದೇ ವಿಧವಾಗಿ ಜ್ಞಾನವನ್ನು ಕೊಟ್ಟ ದೇವರು ತನ್ನ ಜ್ಞಾನ ಹೇಗಿರುವುದು ಹೇಳಲಿಲ್ಲ ಆದರೆ, ದೇವರ ಜ್ಞಾನವೊಂದರ ಅನುಭವವನ್ನು ಹೊಂದಿದವರು, ಎಲ್ಲ ಜ್ಞಾನಗಳಲ್ಲಿ ದೇವರ ಜ್ಞಾನ ದೊಡ್ಡದೆಂದು, ಅದರೊಂದಿಗೆ ಸಮಾನವಾದುದಿಲ್ಲವೆಂದು, ಪ್ರಕೃತಿಗಿಂತ ಭಿನ್ನವಾಗಿರುವುದೆಂದು, ಸೃಷ್ಠಿಗಿಂತ ಬೇರೆಯಾಗಿರುವುದೆಂದು ಅದನ್ನು "ಜಪರ" ಜ್ಞಾನವೆಂದು ಕರೆದಿದ್ದಾರೆ. ಎಷ್ಟೋ ವಿಧಗಳ ಅಕ್ಕಿಗಳಲ್ಲಿ ಚೆನ್ನಂಗಿ ಅಕ್ಕಿ ಅನ್ನವಾಗಿ ತಿನ್ನುವುದಕ್ಕೆ, ಅಕ್ಕಿಯಾಗಿ ತಿನ್ನುವುದಕ್ಕೆ ರುಚಿಯಾಗಿ ಇವೆಯೆಂದು ಹೇಳಿದಂತೆ, ಎಷ್ಟೋ ವಿಧಗಳ ಜ್ಞಾನಗಳಲ್ಲಿ ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಜ್ಞಾನ ದೊಡ್ಡದೆಂದು ಅದಕ್ಕೆ ಪ್ರತ್ಯೇಕವಾದ 'ಜಪರ' ಎನ್ನುವ ಹೆಸರು ಇಟ್ಟು ಹೇಳಿದ್ದಾರೆ.

ದೇವರ ಜ್ಞಾನವನ್ನು ಮನುಷ್ಯರು ಹೇಗೆ ಹೇಳಿದರೂ ಮನುಷ್ಯರ ಮಾತನ್ನು ದೇವರು ಹೇಳಬೇಕಾದ ಅವಶ್ಯವಿಲ್ಲ. ಆದ್ದರಿಂದ ಜಪರ ಜ್ಞಾನವನ್ನು ನಾನು ಎರಡನೆ ಬಾರಿ ನಿನಗೆ ಹೇಳುತ್ತಿದ್ದೇನೆಂದು ಭಗವಂತನು ಭಗವದ್ಗೀತೆಯನ್ನು ಹೇಳಿದಾಗ ಹೇಳಲಿಲ್ಲ. 'ಜಪರ' ಎನ್ನುವ ಹೆಸರನ್ನು ಮನುಷ್ಯರಾದ ನಾವು ಇಟ್ಟುಕೊಂಡಿದ್ದೇವೆ. ಆದ್ದರಿಂದ ಅದರ ಅರ್ಥವನ್ನು, ವಿವರವನ್ನು ಹೇಳಿ

ಕೊಳ್ಳಬೇಕಾದ ಜವಾಬ್ದಾರಿ ನಮ್ಮ ಮೇಲೆಯೇ ಇದೆ. ಮತ್ತೊಂದು ವಿಷಯವೇನೆಂದರೆ! ದೇವರು ಭಗವಂತನಾಗಿ ಬಂದು ಸಾಕಾರವಾಗಿ ಅರ್ಜುನನಿಗೆ ದ್ವಾಪರಯುಗದಲ್ಲಿ ಜ್ಞಾನವನ್ನು ಹೇಳಿದ್ದಾನೆ. ಮೊದಲು ಹೇಳಿದ ಜ್ಞಾನವನ್ನೇ ಎರಡನೆ ಬಾರಿ ಅರ್ಜುನನಿಗೆ ಹೇಳಿದಾಗ ಕೂಡಾ ಆಗ ಹೇಳಿದ ಜ್ಞಾನಕ್ಕೆ ಭಗವದ್ಗೀತೆಯೆಂದು ಆತನು ಹೆಸರು ಇಡಲಿಲ್ಲ. ಕೃಷ್ಣನು ಹೇಳಿದ ಜ್ಞಾನವನ್ನು ಗ್ರಂಥವಾಗಿ ಮಾಡಿಕೊಂಡ ನಂತರ ಮನುಷ್ಯರೇ ಅದಕ್ಕೆ **"ಭಗವದ್ಗೀತೆ"** ಎಂದು ಹೆಸರು ಇಟ್ಟಿದ್ದಾರೆ. ಭಗವಂತನು ಹೇಳಿದ 'ಜ್ಞಾನ ಹದ್ದು' ಆಗಿರುವುದರಿಂದ ಅದನ್ನು ಅದೇ ಅರ್ಥ ಬರುವಂತೆ 'ಭಗವದ್ಗೀತೆ' ಎಂದು ಅಂದಿದ್ದಾರೆ. ಎಲ್ಲೇ ಆಗಲಿ ದೇವರು ತನ್ನ ಜ್ಞಾನಕ್ಕಾಗಲೀ, ಜ್ಞಾನ ಗ್ರಂಥಗಳಿಗಾಗಲೀ ಆತನು ಸ್ವತಃವಾಗಿ ಹೆಸರು ಇಡಲಿಲ್ಲ. ಎಲ್ಲದಕ್ಕೂ ಮನುಷ್ಯರೇ ಹೆಸರುಗಳನ್ನಿಡುವುದು ನಡೆದಿದೆ. ಮುಸ್ಲಿಮ್‌ರ ಗ್ರಂಥವೆಂದು ಎಲ್ಲರೂ ಅಂದುಕೊಳ್ಳುವ ಖುರಾನ್ ಗ್ರಂಥಕ್ಕೂ ಸಹ ದೇವರು ಆ ಹೆಸರನ್ನು ಇಡಲಿಲ್ಲ. ಅದು ದೇವರ ಕಡೆಯಿಂದ ಅವತರಿಸಿದ ಗ್ರಂಥವೆಂದು, ಸತ್ಯಸಮೇತವಾಗಿ ಬಂದಿರುವ ಗ್ರಂಥವೆಂದು, ಅಂತಿಮ ದೈವಗ್ರಂಥವೆಂದು ಹೇಳಿದ್ದಾರೆ ಹೊರತು ಖುರಾನ್ ಎನ್ನುವ ಪ್ರತ್ಯೇಕವಾದ ಹೆಸರನ್ನು ದೇವರು ಇಡಲಿಲ್ಲ. ಆ ಹೆಸರನ್ನು ಮನುಷ್ಯರೇ ಇಟ್ಟುಕೊಂಡಿದ್ದಾರೆ.

ಕೆಲವರು ಭೂಮಿಮೇಲೆ ಅವರಿಗೆ ತಿಳಿದ ಜ್ಞಾನದ ಪ್ರಕಾರ ದೈವ ಗ್ರಂಥಗಳು ನಾಲ್ಕೆಂದು ಹೇಳುತ್ತಿದ್ದಾರೆ. ಕೆಲವರು ಮೂರು ಎಂದು ಅನ್ನುತ್ತಿದ್ದಾರೆ. ಮೂರು ಗ್ರಂಥಗಳನ್ನು ಅನುಸರಿಸಿ ಮನುಷ್ಯರು ಮೂಡು ಸಮಾಜಗಳಾಗಿ ಬೇರ್ಪಟ್ಟು, ಅವುಗಳಿಗೇ ಮತ ಎಂದು ಹೆಸರಿಟ್ಟುಕೊಂಡಿದ್ದಾರೆ. ಆದ್ದರಿಂದ ಮೂರು ಮತಗಳಿಗೂ ಮೂರು ಗ್ರಂಥಗಳೇ ಇವೆಯೆಂದು ಕೆಲವರು ಅನ್ನುತ್ತಿದ್ದಾರೆ. ಗ್ರಂಥಗಳು ಒಂದು ತೌರಾತ್, ಎರಡು ಇಂಜೀಲ್, ಮೂರು ಖುರಾನ್ ಎಂದು ಹೇಳುತ್ತಿದ್ದಾರೆ. ಮೂರು ಗ್ರಂಥಗಳಿಗೂ ಮೂರು ಮುಖ್ಯವಾದ ಮತಗಳು ತಯಾರಾಗಿವೆಯೆಂದು, ಅದರಲ್ಲಿ ಒಂದು ಇಂದೂ (ಹಿಂದೂ) ಮತ. ಎರಡು ಕ್ರೈಸ್ತವ ಮತ, ಮೂರು ಮುಸ್ಲಿಮ್ ಮತ ಎಂದು ಕರೆಯುತ್ತಿದ್ದಾರೆ. ಆದರೆ

ಮತಗಳು ಮೂರಾದರೂ ಗ್ರಂಥಗಳು ಮಾತ್ರ ನಾಲ್ಕು ಇವೆಯೆಂದು ಕೆಲವರು ಅನ್ನುತ್ತಿದ್ದಾರೆ. ಅವು ಕ್ರಮವಾಗಿ ಒಂದು ಜಬೂರ, ಎರಡು ತೌರಾತ್, ಮೂರು ಇಂಜೀಲ್, ನಾಲ್ಕು ಖುರಾನ್ ಎಂದು ಅನ್ನುತ್ತಿದ್ದಾರೆ. ಆದರೆ ಇವುಗಳಲ್ಲಿ ಒಂದು ಖುರಾನ್ ಹೊರತು ಉಳಿದ ಮೂರು ಗ್ರಂಥಗಳನ್ನು ಕುರಿತು ಬಹಳ ಜನರಿಗೆ ತಿಳಿದಿಲ್ಲವೆಂದೇ ಹೇಳಬಹುದು. ಇದರಲ್ಲಿ ಇಂಜೀಲ್ ಎಂದರೇ ಬೈಬಲ್ ಗ್ರಂಥವೆಂದು ಕೆಲವರಿಗೆ ತಿಳಿದರೂ, ತೌರಾತ್ ಎಂದರೆ ಏನೋ ಯಾರಿಗೂ ತಿಳಿದಿಲ್ಲ. ತೌರಾತ್ ಗ್ರಂಥವೆಂದು ಹೇಳುವವರು ಯಾರೂ ಅದನ್ನು ನೋಡಲಿಲ್ಲ. ಅದು ಯಾವ ಭಾಷೆಯಲ್ಲಿ ಮುದ್ರಿಸಿರುವುದು ತಿಳಿದಿಲ್ಲ. ಅದು ಎಲ್ಲಿರುವುದು ತಿಳಿದಿಲ್ಲ. ತೌರಾತ್ ಎನ್ನುವುದು ತಿಳಿದರೂ, ತಿಳಿಯದಿದ್ದರೂ ಅದು ದೈವಗ್ರಂಥವೆಂದು ನಾವೂ ಸಹ ಹೇಳುತ್ತಿದ್ದೇವೆ. ಆದರೆ ತೌರಾತ್ ಎನ್ನುವ ಹೆಸರು ವಿದೇಶಗಳಲ್ಲಿರುವ ಹೆಸರೆಂದು, ಆದ್ದರಿಂದ ಆ ಹೆಸರನ್ನು ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆಂದು ತಿಳಿಯುತ್ತಿದೆ. ಎಲ್ಲರಿಗೂ ತಿಳಿಯದ ರಹಸ್ಯವೇನೆಂದರೇ ತೌರಾತ್ ಗ್ರಂಥ ಮೊದಲು ಭಾರತದೇಶದಲ್ಲೇ ಹುಟ್ಟಿದೆ. ಭಾರತದೇಶದಲ್ಲಿ ಆ ಗ್ರಂಥವೊಂದರ ಹೆಸರು 'ಭಗವದ್ಗೀತೆ' ಎಂದು ಹೇಳಲ್ಪಟ್ಟಿದೆ. 'ಭಗವದ್ಗೀತಾ" ಎನ್ನುವ ಹೆಸರನ್ನು ಭಾರತೀಯರು ಭಗವಂತನು ಹೇಳಿರುವು ದೆನ್ನುವಂತೆ ಅರ್ಥಬರುವಹಾಗೆ 'ಭಗವದ್ಗೀತೆ' ಎನ್ನುವ ಹೆಸರನ್ನಿಟ್ಟಾಗ, ಪಶ್ಚಿಮ ದೇಶಗಳಲ್ಲಿ ಅವರ ಭಾಷೆಯಲ್ಲಿ ಸರಿಹೋಗುವಂತೆ ಮೂರು ಅಂಧಕಾರಗಳು, ಮೂರು ತಿಳಿಯದ ರಹಸ್ಯಗಳು, ಮೂರು ತಿಳಿಯದ ಕತ್ತಲ ರಾತ್ರಿಗಳೆನ್ನುವ ಅರ್ಥಬರುವಂತೆ ಭಗವದ್ಗೀತೆಯನ್ನು 'ತೌರಾತ್' ಗ್ರಂಥವೆಂದು ಕರೆದಿದ್ದಾರೆ. ಮೂರು ಆತ್ಮಗಳ ವಿಷಯ ಇರುವುದರಿಂದ 'ಕತ್ತಲಿನಿಂದಿರುವ ತಿಳಿಯದ ಆತ್ಮಗಳು' ಎನ್ನುವ ಉದ್ದೇಶದಿಂದ ಆ ಗ್ರಂಥವನ್ನು ಮನುಷ್ಯರು ತೌರಾತ್ ಗ್ರಂಥವೆಂದು ಅಂದಿದ್ದಾರೆ. ಈ ವಿವರವನ್ನು ಈ ಮಧ್ಯಕಾಲದಲ್ಲಿ **"ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎನ್ನುವ ಗ್ರಂಥದಲ್ಲಿ ನಾವು ಸ್ವತಃವಾಗಿ ಹೇಳುವುದು ನಡೆದಿದೆ. ಮೂರು ರಾತ್ರಿಗಳ ವಿವರದೊಂದಿಗೆ ತೌರಾತ್ ಗ್ರಂಥವೆಂದರೇ ಪ್ರಥಮ ದೈವಗ್ರಂಥವಾದ ಭಗವದ್ಗೀತೆ ಎಂದು ತಿಳಿದುಹೋಗಿದೆ.

ಇನ್ನು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಒಂದು ಕಡೆ ಹೇಳಲಾಗಿರುವ 'ಜಬೂರ' ಎನ್ನುವ ಹೆಸರು ವಾಸ್ತವವೇ ಆದರೂ ಅದು ಗ್ರಂಥವಲ್ಲ. ಕೆಲವರು ತಪ್ಪಾಗಿ ಅರ್ಥೈಸಿಕೊಂಡು ಜಬೂರ ಎನ್ನುವುದು ಒಂದು ಗ್ರಂಥವೆಂದುಕೊಂಡರೂ ಅದು ವಾಸ್ತವವಲ್ಲ. ಜಬೂರ ಎನ್ನುವುದು ಪಶ್ಚಿಮ ದೇಶಗಳಲ್ಲಿ ಹೇಳುವ ಹೆಸರು. 'ಜಬೂರ' ಎನ್ನುವ ಹೆಸರು ಭಾರತದೇಶದಲ್ಲಿ 'ಜಪರ' ಎನ್ನುವ ಹೆಸರಾಗಿ ಇತ್ತು. ಭಾರತದೇಶದಲ್ಲಿ 'ಜಪರ' ಎನ್ನುವ ಹೆಸರು ಸ್ವಲ್ಪ ಬದಲಾವಣೆಯಾಗಿ ವಿದೇಶಗಳಲ್ಲಿ 'ಜಬೂರ' ಎಂದು ಕರೆಯಲ್ಪಟ್ಟಿದೆ. ಜಬೂರ ಎಂದು ಹೆಸರು ಬದಲಾದರೂ, ಬದಲಾಗದಿದ್ದರೂ ಅದು ಗ್ರಂಥವಲ್ಲ. ಗ್ರಂಥರೂಪವಾಗದ ದೈವಜ್ಞಾನವನ್ನು ಭಾರತದೇಶದಲ್ಲಿ ಜಪರ ಎಂದೂ ಇತರ ದೇಶಗಳಲ್ಲಿ ಜಬೂರ ಎಂದೂ ಹೇಳುತ್ತಿದ್ದರು. ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಜ್ಞಾನ ಗ್ರಂಥರೂಪವಾಗದ ಮೂರು ಯುಗಗಳಲ್ಲಿ ದೈವಜ್ಞಾನಕ್ಕೆ ಜಪರ ಅಥವಾ ಜಬೂರ ಎಂದು ಹೆಸರುಗಳಿದ್ದವು. ಕಾಲಕ್ರಮೇಣ ಭಾರತದೇಶದಲ್ಲಿ ಜಪರ ಎನ್ನುವ ಶಬ್ದವೇ ಇಲ್ಲದಂತೆ ಹೋಗಿದೆ. ಸ್ವಲ್ಪ ಹೆಸರಿನ ಬದಲಾವಣೆ ಯಿಂದ ಪಶ್ಚಿಮ ದೇಶಗಳಲ್ಲಿ ಜಬೂರ ಆಗಿ ನಿಂತರೂ, ಅದು ಶಬ್ದರೂಪವಾದ ಜ್ಞಾನವೆಂದು ತಿಳಿಯದೆ ಬರಹರೂಪವಾದ ಗ್ರಂಥವೆಂದು ಅಂದುಕೊಳ್ಳುತ್ತಿದ್ದಾರೆ. ಈ ವಿಧವಾಗಿ ದೇವರ ಜ್ಞಾನ ಮನುಷ್ಯರಿಂದ ನಾಲ್ಕು ಹೆಸರುಗಳಾಗಿ ಕರೆಯಲ್ಪಡುತ್ತಿದೆ. ಆದರೇ ಈ ನಾಲ್ಕು ಹೆಸರುಗಳಲ್ಲಿ ಯಾವೊಂದು ಹೆಸರು ಸಹ ದೇವರು ಇಟ್ಟಿರುವುದಲ್ಲ.

ಜಬೂರ ಅಥವಾ ಜಪರ ಎನ್ನುವ ಹೆಸರುಗಳಿರುವವು ಗ್ರಂಥಗಳಲ್ಲ ಎನ್ನುವ ವಿಷಯ ಇಲ್ಲಿಯವರೆಗು ಯಾರೂ ಹೇಳಿರಲಿಲ್ಲ. ಅವು ಗ್ರಂಥಗಳಲ್ಲ ಎನ್ನುವ ವಿಷಯ ಈಗಲೇ, ಇಲ್ಲೇ ಹೊಸದಾಗಿ ಕೇಳುತ್ತಿದ್ದೀರ. ಇದು ಹೊಸ ವಿಷಯವಾದ್ದರಿಂದ ಬಹಳ ಜನರಿಗೆ ಬಹಳ ಪ್ರಶ್ನೆಗಳು ಬರಬಹುದು. ಕೆಲವರಿಗಾದರೇ ಪ್ರಶ್ನೆಗಳೊಂದಿಗೆ ಅಸೂಯೆ ಗುಣವೂ ಸಹ ಬರಬಹುದು. ಪ್ರಶ್ನೆಗಳು ಬಂದರೆ ಅದಕ್ಕೆ ಎಲ್ಲ ವಿಧಗಳಲ್ಲಿ ಉತ್ತರ ಹೇಳುವುದಕ್ಕೆ ನಾವು ಸಿದ್ಧವಾಗಿ ಇದ್ದೇವೆ. ಆದರೆ ಅಸೂಯದಿಂದ ಮಾತನಾಡುವವರಿಗೆ ನಾವು

ಏನೂ ಉತ್ತರ ಹೇಳುವುದಿಲ್ಲ. ಅವರಿಗೆ ಒಂದೇ ಮಾತನ್ನು ಹೇಳಬಲ್ಲೆವು. ಅದೇನೆಂದರೇ! ನಾವು ಹೇಳುವುದೇ ಸತ್ಯವೆಂದು, ನಂಬಿರೆಂದು ನಾನು ಹೇಳುತ್ತಿಲ್ಲ. **ಜ್ಞಾನವನ್ನು ಸತ್ಯಸಮೇತವಾಗಿ ಜ್ಞಾಪಕ ಮಾಡುವುದೇ ನನ್ನ ಕರ್ತವ್ಯ. ನನ್ನ ಮಾತನ್ನು ನಂಬಿ ಕೇಳುವ ಧ್ಯಾಸದಲ್ಲಿರುವವರಿಗೆ ಎಂತಹ ಪ್ರಶ್ನೆ ಬಂದರೂ ಆ ಸಂಶಯವನ್ನು ತೀರಿಸುವುದು ನಮ್ಮ ಜವಾಬ್ದಾರಿ.** ಆದ್ದರಿಂದ ಅನ್ವೇಷಣೆ ದೃಷ್ಠಿಯಿಂದ ಯಾರು ಪ್ರಶ್ನೆ ಕೇಳಿದರೂ ಅದಕ್ಕೆ ಉತ್ತರವನ್ನು ಹೇಳಬಲ್ಲೆವು.

**1)ಪ್ರ :– ನೀವು ದೈವಗ್ರಂಥಗಳ ಹೆಸರುಗಳನ್ನು ದೇವರು ಇಡಲಿಲ್ಲ, ಮನುಷ್ಯರೇ ಇಟ್ಟಿದ್ದಾರೆಂದು ಹೇಳುತ್ತಿದ್ದೀರ. ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಆರನೇ ಸೂರಾ 91ನೇ ಆಯತ್‌ನಲ್ಲಿ "ತೌರಾತ್ ಗ್ರಂಥವನ್ನು ದೇವರೇ ಮನುಷ್ಯರಿಗೆ ಕೊಟ್ಟಹಾಗೆ ಇದೆ". ಅಷ್ಟೇ ಅಲ್ಲದೆ ಐದನೆ ಸೂರಾದಲ್ಲಿ 44ನೇ ಆಯತ್‌ನಲ್ಲಿ "ತೌರಾತ್ ಗ್ರಂಥವನ್ನು ನಾನೇ ಅವತರಿಸುವಂತೆ ಮಾಡಿದ್ದೇನೆ" ಎಂದು ದೇವರೇ ಹೇಳಿದಂತೆ ಇದೆ. ಇದನ್ನನುಸರಿಸಿ ನೋಡಿದರೇ ದೇವರೇ ಆ ಹೆಸರುಗಳನ್ನು ಆ ಗ್ರಂಥಗಳಿಗೆ ಇಟ್ಟಿದ್ದಾನೆಂದು ತಿಳಿಯುತ್ತಿದೆ ಅಲ್ಲವೆ! ಹಾಗಿರುವಾಗ ಮನುಷ್ಯರೇ ಆ ಹೆಸರುಗಳನ್ನು ಇಟ್ಟಿದ್ದಾರೆಂದು ಹೇಗೆ ಹೇಳಬಲ್ಲಿರಾ?**

**ಉತ್ತರ :–** ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಬಹಳ ಕಡೆ ತೌರಾತ್ ಗ್ರಂಥವನ್ನು ನಾನೇ ಅವತರಿಸುವಂತೆ ಮಾಡಿದ್ದೇನೆಂದೂ, ಹಾಗೆಯೇ ಕೆಲವು ಕಡೆ ಇಂಜೀಲು (ಬೈಬಲ್) ಗ್ರಂಥವನ್ನು ಕೂಡಾ ನಾನೇ ಈಸಾ (ಯೇಸು) ಮೂಲಕ ಕೊಟ್ಟಿದ್ದೇನೆಂದು ಹೇಳಿದಂತೆ ಇದೆ. ತೌರಾತ್ ಮತ್ತು ಇಂಜೀಲ್ ಗ್ರಂಥಗಳು ಎರಡು ಖುರಾನ್‌ಗಿಂತ ಮೊದಲು ಬಂದಿರುವವೇ. ಆದರೇ ಆ ಹೆಸರುಗಳನ್ನು ಮನುಷ್ಯರೇ ಇಟ್ಟಿದ್ದಾರೆ. ಮನುಷ್ಯರು ಇಟ್ಟಿರುವ ಹೆಸರುಗಳನ್ನೇ ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆ. ಅಷ್ಟೇ ಹೊರತು ದೇವರು ಸ್ವತಃವಾಗಿ ಹೆಸರುಗಳು ಇಟ್ಟಂತೆ ಇಲ್ಲ ಅಲ್ಲವೆ! ಇರುವ ಹೆಸರುಗಳೊಂದಿಗೆ ಆ ಗ್ರಂಥಗಳನ್ನು ಕುರಿತು ಹೇಳಿದ್ದಾನೆ. ಖುರಾನ್ ಗ್ರಂಥದಲ್ಲಿ ಆ ಗ್ರಂಥವೊಂದರ ಹೆಸರನ್ನು ಅಂದರೆ 'ಖುರಾನ್' ಹೆಸರನ್ನು ದೇವರು ಎಲ್ಲೂ ಹೇಳಲಿಲ್ಲ. ದೇವರು ಅದನ್ನು ಇದು ನನ್ನ ಶಾಸನವೆಂದೂ, ನನ್ನ ಸತ್ಯವೆಂದು, ನನ್ನ ಆಜ್ಞೆ ಎಂದು ವರ್ಣಿಸುತ್ತಾ

ಹೇಳಿದ್ದಾನೆ ಆದರೆ ಹೆಸರು ಇಟ್ಟು ಹೇಳಲಿಲ್ಲ. ದೇವರು ಹೇಳಿದ ನಂತರ ಅದನ್ನು ಮನುಷ್ಯರು 'ಖುರಾನ್; ಎಂದು ಕರೆಯಲಾಗಿದೆ. ದೇವರು ತನ್ನ ಜ್ಞಾನವನ್ನು ತಾನು ಹೆಸರಿಟ್ಟು ಎಲ್ಲೂ ಹೇಳಲಿಲ್ಲ. ಮನುಷ್ಯರು ಹೇಳಿದ ಹೆಸರನ್ನೇ ದೇವರು ಹೇಳಿದ್ದಾನೆ. ದೇವರು ಜ್ಞಾನವನ್ನು ಹೇಳಿದ ನಂತರ ಅದಕ್ಕೆ ಮನುಷ್ಯರು ಹೆಸರು ಇಡುವುದಾಗಿದೆಯೆಂದು ಮರೆಯಬಾರದು.

**2) ಪ್ರ :– ದೇವರು ಎಲ್ಲೂ ಹೇಳದ ಹೆಸರುಗಳನ್ನು ನೀವು ಹೊಸದಾಗಿ ಹೇಳುತ್ತಿದ್ದೀರ. "ಜಪರ" ಎನ್ನುವ ಹೆಸರು ಯಾವ ಗ್ರಂಥದಲ್ಲಾಗಲೀ, ದೇವರು ಹೇಳಿದ ಯಾವ ಬೋಧನೆಯಲ್ಲಾಗಲೀ ಇಲ್ಲ. ಅಂಥದ್ದನ್ನು ನೀವು ಹೊಸದಾಗಿ ಹೆಸರಿಟ್ಟು ಬರೆದು ಇದು ದೇವರು ಹೇಳಿದ ಜ್ಞಾನ ಎನ್ನುತ್ತಿದ್ದೀರ. ಪ್ರಪಂಚದಲ್ಲಿ ನಿವು ಹೊರತು ಇನ್ಯಾರೂ ಈ ವಿಷಯವನ್ನು ಹೇಳಲಿಲ್ಲ. "ಜಪರ" ಎನ್ನುವ ಹೆಸರನ್ನು ನೀವು ಸೃಷ್ಠಿಸಿ ಅದನ್ನು ದೇವರ ಗ್ರಂಥದೊಂದಿಗೆ ಅಥವಾ ದೇವರ ಜ್ಞಾನದೊಂದಿಗೆ ಸಂಬಂಧ ಇಡುವುದು ಒಳ್ಳೆಯದಲ್ಲವೇನೋ ಅನಿಸುತ್ತಿದೆ. ಮೇಲಾಗಿ ಈ ಕಾರ್ಯ ದೈವವಿರುದ್ಧವಾದುದೇನೋ ಅನಿಸುತ್ತಿದೆ. ಏಕೆಂದರೇ! ಖುರಾನ್ ಗ್ರಂಥದಲ್ಲಿ ಸೂರಾ ಎರಡು ಆಯತ್ 79ರಲ್ಲಿ ಹೀಗೆ ಇದೆ. (2–79) "ತಮ್ಮ ಸ್ವಹಸ್ತಗಳಿಂದ ಲಿಖಿಸಿದ ಗ್ರಂಥವನ್ನು ದೈವಗ್ರಂಥವೆಂದು ಹೇಳಿ, ಪ್ರಾಪಂಚಿಕ ತುಚ್ಛ ಪ್ರಯೋಜನವನ್ನು ಹೊಂದಲು ನೋಡುವವರಿಗೆ 'ವಿನಾಶ' ಇದೆ. ಅವರ ಈ ಸ್ವಹಸ್ತ ಲಿಖಿತ ರಚನೆ ಅವರ ವಿನಾಶಕ್ಕೆ ದಾರಿ ತೋರಿಸುತ್ತದೆ. ಅವರ ಈ ಸಂಪಾದನೆ ಕೂಡಾ ಅವರ ನಾಶಕ್ಕೆ ಕಾರಣಭೂತವಾಗುತ್ತದೆ." ಎಂದು ಇದೆ. ಈಗ "ಜಪರ" ಎನ್ನುವ ಹೆಸರನ್ನು ನೀವು ಸ್ವತಃವಾಗಿ ಬರೆದಿರುವುದು ಅಲ್ಲವಾ? ಈ ಆಯತ್‌ನಲ್ಲಿ ಹೇಳಿರುವುದಕ್ಕೆ ನೀವು ಏನು ಉತ್ತರ ಹೇಳಬಲ್ಲಿರಾ?**

**ನನ್ನ ಉತ್ತರ :–** ಖುರಾನ್‌ನಲ್ಲಿ ಹೇಳಿದ ವಾಕ್ಯವನ್ನು ಸತ್ಯವೆಂದು ನಾನು ಒಪ್ಪಿಕೊಳ್ಳುತ್ತಿದ್ದೇನೆ. ಯಾರಾದರೂ ಸ್ವತಃವಾಗಿ ಬರೆದು ದೇವರು ಹೇಳಿದ ಜ್ಞಾನವೆಂದು ನಂಬಿಸುವುದು ತಪ್ಪಾಗುತ್ತದೆ. ಆದರೇ ಇಲ್ಲಿ ನಾವು 'ಜಪರ' ಎನ್ನುವ ಹೆಸರು ಮನುಷ್ಯರು ಇಟ್ಟಿರುವುದೇ ಎಂದು ಹೇಳಿದ್ದೇನೆ ಹೊರತು, ಅದನ್ನು ದೇವರು ಹೇಳಿದ್ದಾನೆಂದು ಅಸತ್ಯ ಹೇಳಿದ್ದರೇ ನನ್ನದು ತಪ್ಪಾಗುತ್ತದೆ.

"ಪ್ರಪಂಚದಲ್ಲಿ ಯಾರೂ ಹೇಳದ ಹೆಸರನ್ನು ನೀವು ಹೇಳಿದ್ದೀರ" ಎಂದು ಅಂದಿದ್ದೀರ. ಈಗ ನಾವು ಹೇಳಿದ 'ಜಪರ' ಎನ್ನುವ ಹೆಸರನ್ನು ಪ್ರಸ್ತುತ ಕಾಲದಲ್ಲಿ ಯಾರೂ ಹೇಳದಿರುವುದೇ! ಅದು ನನಗೆ ಹೊರತು ಯಾರಿಗೂ ತಿಳಿದಿಲ್ಲ, ಆದ್ದರಿಂದ ಯಾರೂ ಹೇಳುವುದಕ್ಕೆ ಅವಕಾಶವಿಲ್ಲ. ಮನುಷ್ಯರು ಯಾರೂ ಹೇಳದಿರುವುದನ್ನು ದೇವರು ನನ್ನಿಂದ ಹೇಳಿಸುತ್ತಿದ್ದಾನೆಂದರೇ ಅದು ನನಗೆ ದೇವರು ಕೊಟ್ಟಿರುವ ವರವೇ ಎಂದು ಹೇಳಬಲ್ಲೆನು. ನಾನು ಎಲ್ಲಾದರೂ ಹೊಸ ವಿಷಯಗಳನ್ನು ಹೇಳಿದರೂ ಅದು ಮೊದಲೇ ದೇವರು ಹೇಳಿದ ಸೂತ್ರವಾಗಿರುತ್ತದೆ. ದೇವರು ಹೇಳದಿರುವುದನ್ನು ನಾನು ಎಲ್ಲಾದರೂ ಹೇಳಿದ್ದೇನೆಂದು ನೀವು ತೋರಿಸಬಲ್ಲಿರಾ? ಆದರೇ ದೇವರು ಎಲ್ಲೂ, ಯಾವ ಗ್ರಂಥದಲ್ಲಿ ಹೇಳದ ವಿಷಯವನ್ನು ಬಹಳ ಕಡೆ ನಿಮಗೆ ಹೇಳಿದ್ದೇನೆ. ಅದು ನಿಜವಾದ ದೇವರ ಜ್ಞಾನವೆಂದು ಹೇಳಿದ್ದೇವೆ. ಆದರೂ ಈ ವಿಷಯದಲ್ಲಿ ನಾನು ದೋಷಿಯಲ್ಲ.

**3) ಪ್ರ :– ನೀವು ದೇವರು ಹೇಳದ "ಜನನ ಸಿದ್ಧಾಂತವನ್ನು" ಹಾಗೇ "ಮರಣಸಿದ್ಧಾಂತವನ್ನು" ಹೇಳಿ ಇದು ದೇವರ ಜ್ಞಾನವೆಂದು ಹೇಳಿದ್ದೀರಲ್ಲವೆ! ಇಲ್ಲಿಯವರೆಗು ಪ್ರಪಂಚದಲ್ಲಿ ಯಾರಿಗೂ ತಿಳಿಯದ ಜನನ ಸಿದ್ಧಾಂತವನ್ನು, ಯಾರೂ ಹೇಳದಿರುವುದನ್ನು ನೀವು ಹೇಳಿದ್ದೀರ. ಅಷ್ಟೇ ಅಲ್ಲದೆ ಇದು ನನಗೆ ಹೊರತು ಯಾವ ಮನುಷ್ಯನಿಗೂ ತಿಳಿಯದೆಂದು ಕೂಡಾ ಕೆಲವು ಸಂದರ್ಭಗಳಲ್ಲಿ ಹೇಳಿದ್ದೀರ. ದೊಡ್ಡ ಡಾಕ್ಟರ್‌ಗಳಿಗೂ ಕೂಡಾ ಈ ಜನನ ವಿಷಯ ತಿಳಿಯದೆಂದು ಹೇಳಿದ್ದೀರ. ನೀವು ಹೇಳಿರುವುದು ಸತ್ಯವಲ್ಲವೆಂದು ಡಾಕ್ಟರ್‌ಗಳು ಸಹಿತ ಹೇಳುತ್ತಿದ್ದಾರೆ. ಅಂತಹ ಅಸತ್ಯ ಜ್ಞಾನವನ್ನು ಹೇಳಿ ಅದು ದೇವರು ಹೇಳಿದ ಜ್ಞಾನವೇ ಎಂದು ನಂಬಿಸುವುದು ತಪ್ಪಲ್ಲವೇ! ಈ ವಿಷಯವನ್ನು ನೀವು ಹೇಗೆ ಸಮರ್ಥಿಸಿಕೊಳ್ಳುತ್ತೀರಾ?**

**ನನ್ನ ಉತ್ತರ :–** ನಿಮಗೆ ತಿಳಿದಷ್ಟು ಮಟ್ಟಿಗೆ ನಾನು ಹೇಳಿದ ವಿಷಯಗಳು ದೇವರು ಹೇಳಲಿಲ್ಲ. ಅಷ್ಟೇ ಅಲ್ಲದೆ ನನಗೆ ತಿಳಿದಷ್ಟುಮಟ್ಟಿಗೆ ನಾನು ಹೇಳಿದ ವಿವರವನ್ನು, ಜ್ಞಾನವನ್ನು ದೇವರು ಕೂಡಾ ಎಲ್ಲೂ ಹೇಳಲಿಲ್ಲ. ಸ್ವಲ್ಪಮಟ್ಟಿಗೆ

ಅಂದರೆ ನಿಮಗೆ ತಿಳಿದಷ್ಟು ಮಟ್ಟಿಗೆ ನನ್ನದು ತಪ್ಪೇ ಆದರೂ ನನಗೆ ತಿಳಿದಷ್ಟು ಮಟ್ಟಿಗೆ (2–79) ವಾಕ್ಯದ ಪ್ರಕಾರ ಕೂಡಾ ನನ್ನದು ರವೆಯಷ್ಟು ಕೂಡಾ ತಪ್ಪಿಲ್ಲ. ನನ್ನದು ತಪ್ಪಿಲ್ಲವೆಂದು ನಾನು ಸಮರ್ಥಿಸಿಕೊಳ್ಳುವುದಿಲ್ಲ ಆದರೆ, ಅದನ್ನು ಹೇಗೆ ತಪ್ಪಲ್ಲವೋ ವಿವರಿಸಿ ಹೇಳಬಲ್ಲೆನು. ಇಲ್ಲಿ ನಿಮಗೆ ಚೆನ್ನಾಗಿ ಅರ್ಥ ವಾಗುವುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳುತ್ತೇನೆ ನೋಡಿರಿ. ದೇವರು ಹೊಲದಲ್ಲಿ ಹತ್ತಿ ಬೆಳೆಯನ್ನು ಬೆಳೆಸಿ ಕೊಟ್ಟಿದ್ದಾನೆ. ಹೊಲದಲ್ಲಿ ಹತ್ತಿ ಚೆನ್ನಾಗಿ ಬೆಳೆದಿದೆ. ದೇವರು ಕೊಟ್ಟಿರುವ ಹತ್ತಿಯನ್ನು ತೆಗೆದುಕೊಂಡು ಅದನ್ನು ಉಪಯೋಗ ಮಾಡಿಕೊಳ್ಳುವುದು ತಿಳಿಯದೇ ಹೋದರೇ ದೇವರು ಹತ್ತಿಯನ್ನು ಕೊಟ್ಟು ಪ್ರಯೋಜನವಿಲ್ಲ. ಪೂರ್ವದಲ್ಲಿ ನಾಗರಿಕತೆ ತಿಳಿಯದ ದಿನಗಳಲ್ಲಿ, ಮನುಷ್ಯ ಬಟ್ಟೆಗಳು ಕಟ್ಟಿಕೊಳ್ಳದ ಕಾಲದಲ್ಲಿ, ಅಡವಿಯಲ್ಲಿ ಬೆಳೆದ ಹತ್ತಿಯನ್ನು ನೋಡಿ ಅದು ಯಾವುದಕ್ಕೆ ಉಪಯೋಗಪಡುತ್ತದೋ ತಿಳಿಯದವನಿರುವಾಗ, ಅವನ ಹತ್ತಿರಕ್ಕೆ ಸ್ವಲ್ಪ ತಿಳುವಳಿಕೆ ಇರುವವನು ಬಂದು "ಇದು ಮನುಷ್ಯರ ಶರೀರವನ್ನು ಮುಚ್ಚಿಟ್ಟುಕೊಳ್ಳುವುದಕ್ಕೆ ಕೆಲಸಕ್ಕೆ ಬರುತ್ತದೆ" ಎಂದು ಹೇಳಿದ್ದಾನಂತೆ. ಆಗ ಅದನ್ನು ಕೇಳಿದವನು ಹತ್ತಿಯನ್ನು ತೆಗೆದುಕೊಂಡು ಶರೀರಕ್ಕೆ ಅಂಟಿಸಿಕೊಂಡಿದ್ದಾನೆ. ಸ್ವಲ್ಪ ಹೊತ್ತಿಗೆ ಅದು ಬಿಚ್ಚಿ ಬಂದಿತು, ಕೆಳಗೆ ಬಿದ್ದು ಹೋಯಿತು. ಅದನ್ನು ನೋಡಿದ ಬುದ್ಧಿವಂತನಾದವನು ಬಂದು ಹತ್ತಿ ವಿಷಯ ಅವನಿಗೆ ತಿಳಿಯದೆಂದು ಗ್ರಹಿಸಿ, ಮೊದಲು ಅರಳೆಯನ್ನು ಹತ್ತಿಯಾಗಿ ಬದಲಾಯಿಸಿ ಅದರಿಂದ ದಾರವನ್ನು ತೆಗೆದು, ದಾರವನ್ನು ಎಣೆದು ಬಟ್ಟೆಯಾಗಿ ಮಾಡಿ ಕೊಟ್ಟಿದ್ದಾನೆ. ಆಗ ಹತ್ತಿ ಮನುಷ್ಯ ಶರೀರವನ್ನು ಹೊದಿಸುವುದಕ್ಕೆ ಕೆಲಸಕ್ಕೆ ಬಂದಿದೆ. ಹತ್ತಿಯನ್ನು ತಿಳಿದವನು ಬಟ್ಟೆಯಾಗಿ ತಯಾರುಮಾಡಿ ಕೊಟ್ಟರೇ ಅದನ್ನು ಮನುಷ್ಯ ಹೇಗೆ ಉಪಯೋಗಿಸಿಕೊಳ್ಳಬೇಕೋ ಬೇರ್ಪಡಿಸಿ ತೋರಿಸಿದಂತಾಗಿದೆ ಅಲ್ಲವೆ! ಹತ್ತಿ ಇರುವುದು ಮಾನವನಿಗೆ ಬಟ್ಟೆಯಾಗಿ ಉಪಯೋಗಪಡುವುದಕ್ಕೇ ಅಲ್ಲವೆ! ಈಗ ತಿಳಿದವನು ಹತ್ತಿಯನ್ನು ಬಟ್ಟೆಯಾಗಿ ಮಾಡಿ ಕೊಡುವುದು ತಪ್ಪು ಎನ್ನುತ್ತೇವಾ? ಹಾಗೆಯೇ ದೇವರು ತನ್ನ ಜ್ಞಾನವನ್ನು ತನ್ನ ಗ್ರಂಥಗಳಲ್ಲಿ ಕಬ್ಬಾ ಹತ್ತಿಯಾಗಿ ಕೊಟ್ಟಿದ್ದಾನೆ. ಆದರೇ ಮನುಷ್ಯ ಅದನ್ನು

ಹೇಗೆ ಗ್ರಹಿಸಬೇಕೋ? ಹೇಗೆ ಉಪಯೋಗಿಸಬೇಕೋ ತಿಳಿಯದ ಸ್ಥಿತಿಯಲ್ಲಿ ಇರುವಾಗ, ಅದನ್ನು ವಿವರಿಸಿ ಹೇಳುವುದಕ್ಕೆ ಭೂಮಿಮೇಲೆ "ಗುರುವು" ಎನ್ನುವಾತನನ್ನು ಕೂಡಾ ಕೊಟ್ಟಿದ್ದಾನೆ. ಗುರುವಿನಿಂದ ತನ್ನ ಜ್ಞಾನವನ್ನು ಬೇರ್ಪಡಿಸಿ ಹೇಳಿ ಮನುಷ್ಯನಿಗೆ ಉಪಯೋಗಪಡುವಂತೆ ಮಾಡಿದ್ದಾನೆ. ಜನನ ಸಿದ್ಧಾಂತವನ್ನು ದೇವರು ತನ್ನ ಗ್ರಂಥದಲ್ಲಿ ಕಚ್ಚಾ ಪದಾರ್ಥವಾಗಿ ಕೊಟ್ಟಿದ್ದಾನೆ. ದೇವರು ಪ್ರಥಮ ದೈವಗ್ರಂಥದಲ್ಲಿ ಸಾಂಖ್ಯಯೋಗದಲ್ಲಿ 22ನೇ ಶ್ಲೋಕದಲ್ಲಿ ಜನನ ಸಿದ್ಧಾಂತವನ್ನು ಕಚ್ಚಾ ಪದಾರ್ಥವಾಗಿ, ಸುಲಭವಾಗಿ ಅರ್ಥವಾಗದ ವಿಧದಲ್ಲಿ ಹೇಳಿದ್ದಾನೆ. ಹಾಗೆಯೇ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 6, ಆಯತ್ 95ರಲ್ಲಿ (6–95)ನೆ ವಾಕ್ಯದಲ್ಲಿ ಜನನ ಸಿದ್ಧಾಂತವನ್ನು ಹೇಳಿದ್ದಾನೆ. ಆದರೇ ಇಲ್ಲಿಯವರೆಗು ಆ ವಾಕ್ಯದಲ್ಲಿ ಜನನ ಸಿದ್ಧಾಂತವಿದೆಯೆಂದು ಯಾರಿಗೂ ತಿಳಿದಿಲ್ಲ. ಆ ವಾಕ್ಯಗಳಲ್ಲಿ ಮೂಟೆಗಟ್ಟಿದ ಜ್ಞಾನವನ್ನು ತಿಳಿಯುವುದಕ್ಕೆ ಮೂಟೆಯನ್ನು ಬಿಚ್ಚಿ ನೋಡಿಕೊಳ್ಳಬೇಕಾಗಿದೆ. ಆದರೇ ಮುಡಿ ಬಿಚ್ಚಲಾರದೆ, ಮೂಟೆಯಲ್ಲಿ ಏನಿದೆಯೋ ನೋಡಿಕೊಳ್ಳಲಾರ ದವರಿಗೆ ಮೂಟೆಯಲ್ಲಿರುವುದೇನೋ ತಿಳಿಯುವಂತೆ ನಾನು ಅಲ್ಲಿರುವ ಮೂಟೆ ಮುಡಿಯನ್ನು ಮಾತ್ರ ಬಿಚ್ಚಿ ತೋರಿಸಿದ್ದೇವೆ. ಕಚ್ಚಾ ಪದಾರ್ಥವಾದ ಅರಳೆಯಿಂದ ದಾರ ತೆಗೆದು ಬಟ್ಟೆಯನ್ನು ತಯಾರು ಮಾಡಿ ಮನುಷ್ಯನಿಗೆ ಉಪಯೋಗ ಪಡುವಂತೆ ಮಾಡಿದ್ದೇವೆ ಹೊರತು, ಅಲ್ಲಿ ಇಲ್ಲದಿರುವುದು ನಮ್ಮ ಸ್ವತಃವಾಗಿ ಹೇಳಿರುವುದು ಯಾವುದೂ ಇಲ್ಲ. ಗ್ರಂಥ ಆಧಾರವಿಲ್ಲದಂತೆ ಕಲ್ಪಿಸಿ ಹೇಳಿದ್ದರೇ ನಮ್ಮ ತಪ್ಪಾಗುತ್ತದೆ. ಹಾಗಲ್ಲದೆ ನಾವು ಎಲ್ಲಾ ಗ್ರಂಥ ಆಧಾರದಿಂದಲೇ ಹೇಳುತ್ತಿದ್ದೇವೆ. ಗ್ರಂಥಗಳಲ್ಲಿನ ಜ್ಞಾನ ಅರ್ಥವಾಗದವರು ಹತ್ತಿಯಿಂದ ಶರೀರವನ್ನು ಹೊದಿಸಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಿರುವವರೊಂದಿಗೆ ಸಮಾನ. ಅಂತಹವರಿಗೆ ಬಟ್ಟೆಯೊಂದರ ಉಪಯೋಗವೇ ತಿಳಿದಿಲ್ಲ. ಅವರು ಹತ್ತಿಯನ್ನೇ ಬಳಸಿದರೂ, ಅದು ಸರಿಯಾದ ಪದ್ಧತಿ ಅಲ್ಲವೆಂದು, ಹತ್ತಿಯನ್ನು ಬದಲಾಯಿಸಿ ಬಟ್ಟೆಯನ್ನು ಕೊಟ್ಟು ಪೂರ್ತಿ ಉಪಯೋಗಪಡುವಂತೆ ಮಾಡುತ್ತಿದ್ದೇವೆ. ಈ ವಿಧಾನದಲ್ಲಿ ಯಾವುದಾದರೂ ಗ್ರಂಥದಲ್ಲಿ ದೇವರು ಹೇಳಿದ ವಿಷಯ

ಅರ್ಥವಾಗಲಿಲ್ಲವೋ ಆ ದೈವಗ್ರಂಥದಲ್ಲಿನ ರಹಸ್ಯವನ್ನು ಬಿಚ್ಚಿ ಹೇಳುವುದೇ ನಮ್ಮ ಕೆಲಸ. ಆ ವಿಧವಾಗಿ ನನ್ನ ಒಳಗಿದ್ದು ಮಾಡಿಸುವವನು ಮಾಡಿಸುತ್ತಿದ್ದಾನೆ.

ಖುರಾನ್ ಗ್ರಂಥದಲ್ಲಿ ಸೂರಾ 6, ಆಯರ್95ರಲ್ಲಿ **"ಸಜೀವದಿಂದ ನಿರ್ಜೀವ, ನಿರ್ಜೀವದಿಂದ ಸಜೀವ"** ಹೇಗೆ ಬರುತ್ತಿದೆಯೋ ಇಲ್ಲಿಯವರೆಗು ಪಂಡಿತರಿಗೂ ಕೂಡಾ ತಿಳಿದಿಲ್ಲ. ಹಾಗೆಯೇ ಭಗವದ್ಗೀತೆಯಲ್ಲಿ ಸಾಂಖ್ಯ ಯೋಗದಲ್ಲಿ 22ನೇ ಶ್ಲೋಕದಲ್ಲಿ **"ಹಳೆ ವಸ್ತ್ರವನ್ನು ಬಿಟ್ಟು, ಹೊಸ ವಸ್ತ್ರವನ್ನು ಧರಿಸಿದಂತೆ"** ಎಂದು ಉದಾಹರಣೆ ಹೇಳಿದ್ದರೂ ಹಳೆವಸ್ತ್ರ ಯಾವುದೋ, ಹೊಸವಸ್ತ್ರ ಯಾವುದೋ ದೊಡ್ಡ ಸ್ವಾಮೀಜಿಗಳಿಗೆ ಸಹಿತ ತಿಳಿಯದಂತೆ ಹೋಗಿದೆ. ಆ ವಿಧವಾಗಿ ತಿಳಿಯದಂತೆ ಹೋಗುವುದೇ ಅಲ್ಲದೆ ಅಲ್ಲಿ ಹೇಳಿದ ಜ್ಞಾನವನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುವುದು ನಡೆಯುತ್ತಿದೆ. ಅಂತಹ ಸಂದರ್ಭಗಳಲ್ಲಿ ನಾವು ಅಲ್ಲಿರುವ ಜ್ಞಾನ ವಿವರವನ್ನು ಬೇರ್ಪಡಿಸಿ ಹೇಳುತ್ತಿದ್ದೇವೆ. ಅದು ಪ್ರಜೆಗಳಿಗೋಸ್ಕರ ಮಾಡುವ ಒಳ್ಳೆಯ ಕೆಲಸವೇ ಅಲ್ಲವೆ! ನನ್ನ ಸ್ವಾರ್ಥ ಕ್ಕೋಸ್ಕರವೋ, ನನ್ನ ಹೊಟ್ಟೆಪಾಡಿಗೋಸ್ಕರವೋ ಹಾಗೆ ಮಾಡಬೇಕಾದ ಕೆಲಸವಿಲ್ಲ. ಎಲ್ಲರು ಸ್ವಾಮೀಜಿಗಳಿರುವಂತೆ, ಮತ ಹಿರಿಯರಿರುವಂತೆ ನಾನೂ ಸಹ ಸಾಧಾರಣವಾಗಿ ಎಲ್ಲರೂ ಹೇಳುವ ಜ್ಞಾನವನ್ನೇ ಹೇಳುತ್ತಾ ಬದುಕಬಹುದು. ನಾನು ಹಾಗಲ್ಲದೇ ಇತರರು ನನ್ನನ್ನು ನೋಡಿ ಅಸೂಯೆಪಡುತ್ತಿದ್ದರೂ ಬಿಡದೆ 'ನಿಜವಾದ ಜ್ಞಾನವನ್ನೇ' ತಿಳಿಸಬೇಕೆಂದು ಕೊಂಡಿದ್ದೇನೆ. ನಾನು ಶರೀರದೊಂದಿಗೆ ಇರುವತನಕ ಅದೇ ಕೆಲಸ ನಡೆಯುತ್ತದೆ.

**4) ಪ್ರ :– ನಿಮ್ಮ ಉದ್ದೇಶ ಒಳ್ಳೆಯದೇ ಆದರೇ, ನೀವು ಹಿಂದೂ ಸಮಾಜದಲ್ಲಿ ಇದ್ದೀರ ಅಲ್ಲವೆ! ಯಾವ ಮತದವರಿಗೆ ಆ ಮತ ಗ್ರಂಥದಲ್ಲಿ ಹೇಳಿದ ಜ್ಞಾನ ಅರ್ಥವಾಗದಿರುವಾಗ, ಇತರ ಮತ ಗ್ರಂಥಗಳಾದ ಖುರಾನ್, ಬೈಬಲ್ ಗ್ರಂಥಗಳಲ್ಲಿನ ವಾಕ್ಯಗಳಿಗೆ ವಿವರವನ್ನು ಹೇಗೆ ಹೇಳಬಲ್ಲಿರಾ? ಬಹಳ ಕಡೆ ನೀವೇ ಹಿಂದೂಗಳಿಗೆ ಭಗವದ್ಗೀತೆ ಅರ್ಥವಾಗಲಿಲ್ಲವೆಂದು, ಹಾಗೆಯೇ ಉಳಿದವರಿಗೂ ಕೂಡಾ ಅವರ ಗ್ರಂಥಗಳೆಂದು ಹೇಳಿಕೊಳ್ಳುವ ಅವುಗಳಲ್ಲಿನ ಜ್ಞಾನ ಅರ್ಥ**

**ವಾಗಲಿಲ್ಲವೆಂದು ಹೇಳಿದ್ದೀರ. ಹಾಗಿರುವಾಗ ಹಿಂದೂವಾದ ನಿಮಗೆ ಭಗವದ್ಗೀತೆ ಅರ್ಥವಾಗಿದೆಯಾ? ನೀವು ಎಲ್ಲಿ ತರಭೇತಿ ಪಡೆದಿದ್ದೀರ?**

**ನಮ್ಮ ಉತ್ತರ :–** ನಾನು ಇಲ್ಲಿಯವರೆಗು ಯಾವ ಗ್ರಂಥದಲ್ಲಿನ ಜ್ಞಾನವನ್ನು ಇತರರ ಬಳಿ ಕಲಿಯಲಿಲ್ಲ. ನಾನು ಮೊದಲು ಓದಿರುವುದು ಭಗವದ್ಗೀತೆ, ನನ್ನ ವಯಸ್ಸು 25 ವರ್ಷಗಳಿರುವಾಗ ಓದುವುದು ನಡೆದಿದೆ. ನಂತರ ಬೈಬಲ್ ಗ್ರಂಥವನ್ನು ಪೂರ್ತಿ ಓದದಿದ್ದರೂ ಅಲ್ಲಲ್ಲಿ ನನ್ನ ವಯಸ್ಸು ಸುಮಾರು 50 ವರ್ಷಗಳಿರುವಾಗ ಓದಿದ್ದೇನೆ. ಖುರಾನ್ ವಿಷಯಕ್ಕೆ ಬಂದರೇ ಈ ಮಧ್ಯೆ ನಾಲ್ಕು ಅಥವಾ ಐದು ವರ್ಷಗಳಿಂದ ನೋಡುವುದು, ಓದುವುದು ನಡೆದಿದೆ. ನಾನು ಓದಿದ ನಂತರ ಹೊರಗಿನ ಪ್ರಪಂಚದಲ್ಲಿ ಪ್ರಜೆಗಳ ಹತ್ತಿರ ಇರುವ ಜ್ಞಾನಕ್ಕೆ ನನಗೆ ತಿಳಿದ ಜ್ಞಾನಕ್ಕೆ ಎಷ್ಟೋ ವ್ಯತ್ಯಾಸ ಕಾಣಿಸುತ್ತಾ ಬಂದಿದೆ. ಮೊದಲು ಹಿಂದೂ ಮತದಲ್ಲಿನ ಸ್ವಾಮೀಜಿಗಳು, ಪೀಠಾಧಿಪತಿಗಳು, ಬಾಬಾಗಳು, ಮಠಾಧಿಪತಿಗಳು ಆದ ಮತ ಹಿರಿಯರಿಗೇ ಭಗವದ್ಗೀತೆ ಜ್ಞಾನ ಅರ್ಥ ವಾಗಲಿಲ್ಲವೆಂದು ತಿಳಿದುಹೋಗಿದೆ. ದೇವರೇ ಭಗವಂತನಾಗಿ ಬಂದು ತನ್ನ ಧರ್ಮಗಳನ್ನು ಜ್ಞಾನರೂಪದಲ್ಲಿ ಭಗವದ್ಗೀತೆಯಾಗಿ ಹೇಳಿಹೋದರೂ, ಅದನ್ನು ಬಿಟ್ಟು ದೇವರು ಹೇಳದ ವೇದಗಳನ್ನು, ಪುರಾಣಗಳನ್ನು, ಉಪನಿಷತ್ತುಗಳನ್ನು ಆಶ್ರಯಿಸಿ ಅವುಗಳನ್ನು ಭಗವದ್ಗೀತೆಗಿಂತ ದೊಡ್ಡದಾಗಿ ಹೇಳುವವರು ಇದ್ದಾರೆ. ಹಿಂದೂಗಳಲ್ಲಿ ನೂರಕ್ಕೆ ಶೇ.ಎಂಬತ್ತರಷ್ಟು ಜ್ಞಾನದ ಮೇಲೆ ಆಸಕ್ತಿ ಇಲ್ಲದವರಾಗಿ ಅವರವರ ಕೆಲಸಗಳಲ್ಲಿ ಲಗ್ನವಾಗಿದ್ದಾರೆ. ಉಳಿದ ಶೇ. ಇಪ್ಪತ್ತರಷ್ಟು ಜನರಲ್ಲಿ ಶೇ. ಹದಿನೈದರಷ್ಟು ವೇದಗಳನ್ನು, ಪುರಾಣಗಳನ್ನು ಆಶ್ರಯಿಸಿದವರು ಇದ್ದಾರೆ. ಉಳಿದ ಶೇ. ಐದರಷ್ಟು ಮಂದಿ ಭಗವದ್ಗೀತೆಯನ್ನು ಆಶ್ರಯಿಸಿದರೂ ಅವರಲ್ಲಿ ಪೂರ್ತಿ ಗಮನ ಕೇವಲ ಶೇ. ಎರಡರಷ್ಟು ಮಂದಿಗೆ ಮಾತ್ರವಿದೆ. ಹಾಗೆ ಗಮನವಿರುವ ಶೇ. ಎರಡರಷ್ಟು ಜನರಲ್ಲಿ, ಭಗವದ್ಗೀತೆಯಲ್ಲಿನ ಜ್ಞಾನವನ್ನು ಅರ್ಥಮಾಡಿಕೊಂಡವರು ಬಹಳ ಕಡಿಮೆ ಇದ್ದಾರೆಂದು ಹೇಳಬಹುದು. ಈ ವಿಧವಾಗಿ ಭಗವದ್ಗೀತಾ ಭಾವವು ಪ್ರಜೆಗಳಿಗೆ ತಿಳಿಯದಂತೆ ಹೋಗಿದೆ. ನಾವು ಭಗವದ್ಗೀತೆಯನ್ನು ಓದಿ ಸುಮಾರು ನಲವತ್ತು ವರ್ಷಗಳು ಆಗುತ್ತಿದೆ. ಅಂದಿಗೇ

ಭಾರತದೇಶದಲ್ಲಿ ಸುಮಾರು ಮುನ್ನೂರ ಇಪ್ಪತ್ತು ಭಗವದ್ಗೀತೆಗಳು ಸಂಸ್ಕೃತದಿಂದ ಬೇರೆಬೇರೆ ಭಾಷೆಗಳಲ್ಲಿ ಅನುವಾದಿಸಿ ಬರೆಯುವುದು ನಡೆದಿದೆ. ಒಂದು ತೆಲುಗು ಭಾಷೆಯಲ್ಲಿ ಮಾತ್ರ ಸುಮಾರು ಐವತ್ತು ಭಗವದ್ಗೀತೆಗಳನ್ನು ವಿವಿಧ ಸ್ವಾಮೀಜಿಗಳು ಬರೆಯುವುದು ನಡೆದಿದೆ. ತೆಲುಗುದಲ್ಲಿ ಇರುವ ಸುಮಾರು ನಲವತ್ತು ಭಗವದ್ಗೀತೆಗಳನ್ನು ನಾವು ನೋಡುವುದು ನಡೆದಿದೆ. ಎಲ್ಲ ಭಗವದ್ಗೀತೆಗಳಲ್ಲೂ ದೇವರು ಹೇಳಿದ ಭಾವನೆ ಕಾಣಿಸಲಿಲ್ಲ. ಭಗವದ್ಗೀತೆ ಶ್ಲೋಕದಲ್ಲಿರುವ ಭಾವನೆ, ಬರೆದ ವಿವರದಲ್ಲಿ ಇಲ್ಲದಂತೆ ಹೋಗಿದೆ. ಕೆಲವು ಕಡೆ ಹೇಳಿರುವುದೊಂದಾದರೇ ಬರೆದಿರುವುದೊಂದಾಗಿರುವಾಗ, ಕೆಲವು ಕಡೆ ಶ್ಲೋಕದಲ್ಲಿರುವುದು ಯಾವ ಕಾರಣಕ್ಕು ವಿವರದಲ್ಲಿ ಇರುವುದಿಲ್ಲ. ಈ ವಿಧವಾಗಿರುವ ಭಗವದ್ಗೀತೆಗಳಿಂದ ಬರೆದವನಿಗೇ ಜ್ಞಾನ ತಿಳಿಯದಂತೆ ಹೋದಾಗ, ಓದುವವನಿಗೆ ಹೇಗೆ ಅರ್ಥವಾಗುತ್ತದೆ? ಓದುವವನು ಬರೆದವನ ಭಾವನೆಯನ್ನನುಸರಿಸಿ ಹೋಗುತ್ತಾನೆ. ಹಾಗಿರುವಾಗ ಮನುಷ್ಯರಿಗೆ ಭಗವದ್ಗೀತೆ ಅರ್ಥವಾಗಿದೆಯೆಂದು ಹೇಳುವುದಕ್ಕೆ ಅವಕಾಶವಿಲ್ಲದಂತೆ ಹೋಗಿದೆ. ಉಳಿದ ಭಾಷೆಗಳಲ್ಲಿನ ಭಗವದ್ಗೀತೆಯನ್ನು ನೋಡಿದರೂ ಎಲ್ಲಾ ಹಾಗೆಯೇ ಇವೆ. ಬರೆದಿರುವುದನ್ನು ಓದುವವರು ಸರಿಯಾಗಿ ಅರ್ಥಮಾಡಿಕೊಳ್ಳುತ್ತಾರೆನ್ನುವ ನಂಬಿಕೆ ಇಲ್ಲದ ಈ ಕಾಲದಲ್ಲಿ, ಬರೆದವರೇ ಸರಿಯಾಗಿ ಬರೆಯದೇ ಹೋದರೇ, ಓದುವವರ ಪರಿಸ್ಥಿತಿ ಹೇಗಿರುತ್ತದೋ ಹೇಳಬೇಕಾದ ಅವಶ್ಯವಿಲ್ಲ. ಈ ವಿಧವಾಗಿ ಭಾರತದೇಶದಲ್ಲಿನ ಆಧ್ಯಾತ್ಮಿಕ ವಿದ್ಯೆ ಅರ್ಥವಾಗದಂತೆ ಹೋಗಿದೆಯೆಂದು ತಿಳಿದುಹೋಗಿದೆ. ಒಬ್ಬರು ಹೇಗೆ ಅನುವಾದಿಸಿದ್ದರೆ ಉಳಿದವರೂ ಸಹ ಸುಮಾರು ಹಾಗೇ ಬರೆದುಕೊಳ್ಳುತ್ತಾ ಹೋಗುವುದರಿಂದ, ಭಗವದ್ಗೀತೆ ವಿಷಯದಲ್ಲಿ ಎಲ್ಲರೂ ತಪ್ಪು ದಾರಿ ಹಿಡಿದು ಹೋದಂತಾಗಿದೆ.

ದೇಶದಲ್ಲಿರುವ ಪ್ರಜೆಗಳೆಲ್ಲರಿಗೂ ಆಧ್ಯಾತ್ಮಿಕದ ಮೇಲೆ ಚಿಂತೆ ಇರುವುದಿಲ್ಲ. ಆಧ್ಯಾತ್ಮಿಕದ ಮೇಲೆ ಧ್ಯಾಸ ಇರುವವರು ಕೆಲವು ಜನರೇ. ಅಂತಹವರಲ್ಲಿ ಕೆಲವರು ಓದುಗರಾದಾಗ, ಕೆಲವರು ಬೋಧಕರಾಗಿರುತ್ತಾರೆ. ಓದುಗರು ಸುಮಾರು ಸಾವಿರ ಸಂಖ್ಯೆಯಲ್ಲಿ ಅಥವಾ ಲಕ್ಷಗಳ ಸಂಖ್ಯೆಯಲ್ಲಿರು

ವಾಗ, ಬೋಧಕರು ಹತ್ತರ ಸಂಖ್ಯೆಯಲ್ಲಿ ಇರುತ್ತಾರೆ. ಹತ್ತರ ಸಂಖ್ಯೆಯಲ್ಲಿರುವ ಬೋಧಕರು ಬೋಧಿಸಿರುವುದನ್ನೇ ಓದುಗರಾಗಿರುವವರೆಲ್ಲಾ ತಿಳಿಯುವುದಕ್ಕೆ ಅವಕಾಶವಿದೆ. ಒಬ್ಬ ಬೋಧಕನು ತಪ್ಪು ಭಾವನೆಯನ್ನು ತಿಳಿಸಿದರೇ, ಉಳಿದ ಓದುಗರೆಲ್ಲರೂ ಅದೇ ಭಾವನೆಯನ್ನು ಗ್ರಹಿಸಿ, ತಪ್ಪು ದಾರಿ ಹಿಡಿದು ಅಜ್ಞಾನಮಾರ್ಗದಲ್ಲಿ ಹೋಗುವ ಅವಕಾಶವಿದೆ. ಹಾಗಿರುವಾಗ ಒಟ್ಟು ಬೋಧಕರು ಎಲ್ಲರಿಗೂ ದೇವರು ಹೇಳಿದ ಜ್ಞಾನದಲ್ಲಿ ಕೀಲಕವಾದ ವಿಷಯ ಅರ್ಥ ವಾಗದಿರುವಾಗ, ಬೋಧಕರೆಲ್ಲರಿಗೂ ಆ ವಿಷಯ ತಪ್ಪಾಗಿ ಅರ್ಥವಾಗಿರುವಾಗ, ಅವರಿಗೆ ಅರ್ಥವಾದ ವಿಷಯವನ್ನೇ ಓದುಗರಿಗೆ ಹೇಳುವುದರಿಂದ ಅವರ ಬೋಧನೆಗಳನ್ನು ಓದುವ ಓದುಗರಾಗಲಿ, ಅವರ ಮಾತುಗಳನ್ನು ಕೇಳುವ ಶಿಷ್ಯರಾಗಲೀ ಎಲ್ಲರೂ ಒಟ್ಟು ತಪ್ಪು ದಾರಿ ಹಿಡಿದು ಹೋದಂತಾಗುತ್ತದೆ. ಹಾಗೆ ಎಲ್ಲರಿಗೂ ಜ್ಞಾನ ವಿಷಯ ಅರ್ಥವಾಗದಿರುವಾಗ ದೇವರು ಹೇಳಿದ ಜ್ಞಾನವೇ ಭೂಮಿಮೇಲೆ ಮನುಷ್ಯರಿಗೆ ತಿಳಿಯದಂತೆ ಹೋಗುತ್ತದೆ. ದೇವರು ಹೇಳಿದ ಜ್ಞಾನ ಇಲ್ಲದಂತೆ ಹೋಗಿ, ಅದರ ಸ್ಥಾನದಲ್ಲಿ ಭಾವನೆ ಬದಲಾದ ಜ್ಞಾನ ಬಂದಿರುವುದರಿಂದ, ದೇವರು ಹೇಳಿದ ಜ್ಞಾನ ಎಲ್ಲರಿಗೂ ತಿಳಿದಂತೇ ಇರುತ್ತದೆ. ಆದರೂ ಅದು ದೇವರು ಹೇಳಿರುವುದು ಅಲ್ಲದಂತೆ ಹೋಗಿ, ಮನುಷ್ಯರ ಭಾವನೆಯಾಗಿರುತ್ತದೆ. ಹಾಗಿರುವಾಗ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ಬಂದು ಸೇರಿವೆಯೆಂದು ಹೇಳಬಹುದು. ಅಧರ್ಮಗಳು ಹೊರಗೆ ಆಕಾಶದಿಂದ ಕಳಚಿ ಬೀಳುವುದಿಲ್ಲ. ಅಧರ್ಮಗಳು ಮನುಷ್ಯ ತಲೆಯಿಂದಲೇ ಹುಟ್ಟುತ್ತಿವೆ. ಯಾವಾಗಾದರೇ ದೇವರು ಹೇಳಿದ ಜ್ಞಾನವನ್ನು ಮನುಷ್ಯ ಗ್ರಹಿಸಲಾರದಂತೆ ಹೋಗುತ್ತಿದ್ದಾನೋ, ಆಗ ಅವನಿಗೆ ತಿಳಿದಿರುವುದು ಅಧರ್ಮವೇ ಹೊರತು, ದೇವರ ಧರ್ಮವಲ್ಲ. ಈ ವಿಧವಾಗಿ ಮನುಷ್ಯ ಗ್ರಹಿಸಿಕೊಳ್ಳುವ ಸಮಯದಲ್ಲಿಯೇ ಧರ್ಮಗಳು ಅಧರ್ಮಗಳಾಗಿ ಬದಲಾಗಿ ಹೋಗುತ್ತಿವೆ. ಒಬ್ಬನಿಗೆ ಒಂದು ಸಮಯದಲ್ಲಿ ಅವನು ಓದಿದ ದೈವಗ್ರಂಥದಿಂದ ಎಲ್ಲಾ ವಿಷಯಗಳು ಚೆನ್ನಾಗಿ ಅರ್ಥವಾಗಿ, ಒಂದು ವಿಷಯ ಮಾತ್ರ ಅರ್ಥವಾಗಲಿಲ್ಲವೆಂದುಕೋ, ಆಗ ಅವನಿಗೆ ತಿಳಿದ ಎಷ್ಟೋ ಧರ್ಮಗಳಲ್ಲಿ

ಒಂದು ಧರ್ಮ ಮಾತ್ರ ಅಧರ್ಮವಾಗಿ ಇದೆಯೆಂದು ತಿಳಿದುಹೋಗುತ್ತಿದೆ. ಈ ವಿಧವಾಗಿ ಕಾಲಕ್ರಮೇಣ ಧರ್ಮಗಳು ಆಗೊಂದು, ಆಗೊಂದು ತಿಳಿಯದಂತೆ ಹೋದಾಗ, ಅವು ಅಧರ್ಮಗಳಾಗಿ ಬದಲಾಗಿಹೋದಂತೆ ಲೆಕ್ಕಿಸಲ್ಪಡುತ್ತವೆ. ದೇವರು ಹೇಳಿದ ಜ್ಞಾನ ಮಾನವನಿಗೆ ಹೆಚ್ಚಿನ ಅಂಶದಲ್ಲಿ ತಿಳಿಯದಂತೆ ಹೋದಾಗ ಧರ್ಮಗಳು ಕುಗ್ಗಿಹೋಗಿ ಅಧರ್ಮಗಳು ಹೆಚ್ಚಾಗಿಹೋಗಿವೆಯೆಂದು ಹೇಳಬಹುದು. ಅಂತಹ ಸಮಯದಲ್ಲಿಯೇ ದೇವರು ಧರ್ಮ ಸಂರಕ್ಷಣಾರ್ಥ ಬಂದು ತನ್ನ ಧರ್ಮಗಳನ್ನು ವಿವರವಾಗಿ ಹೇಳಿಹೋಗುವನು. ದೇವರು ಭಗವಂತನಾಗಿ ಭೂಮಿಮೇಲೆ ಮನುಷ್ಯನಾಗಿ ಬಂದು ತನ್ನ ಧರ್ಮಗಳನ್ನು ತಿಳಿಸುವವರೆಗು ಮನುಷ್ಯನಲ್ಲಿನ ಅಜ್ಞಾನದ ಕಗ್ಗಂಟು, ಅಧರ್ಮಗಳ ಪೀಡೆ ಬಿಟ್ಟುಹೋಗದು.

**5) ಪ್ರ :– ನೀವು ಭಗವದ್ಗೀತೆಯನ್ನು ಓದಿದಾಗ ದೇವರು ಹೇಳಿದ ಧರ್ಮಗಳು ಮನುಷ್ಯರ ಬರಹದಲ್ಲಿ ಅಧರ್ಮಗಳಾಗಿ ಇವೆಯೆನ್ನುವುದು ತಿಳಿದಿದೆಯಾ?**

**ಉತ್ತರ :–** ಸುಮಾರು ಶೇ. ತೊಂಬತ್ತು (90) ರಷ್ಟು ಧರ್ಮಗಳು ಅಧರ್ಮಗಳಾಗಿ ರೂಪಬದಲಾಯಿಸಿಕೊಂಡು, ಭಗವದ್ಗೀತೆಯಲ್ಲಿ ಕಾಣಿಸಿವೆ. ಹಾಗಿರುವಾಗ ಭಗವದ್ಗೀತೆಯನ್ನು ಓದುವ ಪ್ರತಿಯೊಬ್ಬನಿಗೂ ಅಧರ್ಮಗಳು ತಿಳಿಯುತ್ತವೆ ಹೊರತು ಧರ್ಮಗಳು ತಿಳಿಯುವುದಿಲ್ಲವಲ್ಲವೆ! ಅಷ್ಟೋ ಇಷ್ಟೋ ಜ್ಞಾನದ ಮೇಲೆ ಧ್ಯಾಸಹೊಂದಿ ಭಗವದ್ಗೀತೆಯನ್ನು ಓದಬೇಕೆಂದುಕೊಂಡವನು ಗೀತೆಯನ್ನು ಓದಿದರೇ ಅದರಲ್ಲಿ ಮನುಷ್ಯರು ಬರೆದ ಅಧರ್ಮಗಳೇ ಓದಿದವರಿಗೆ ತಿಳಿಯುತ್ತವೆ. ಆಗ ಅವರಿಗೆ ಅಧರ್ಮಗಳೇ ತಿಳಿಯುತ್ತವಲ್ಲವೆ! ದೇವರ ಧರ್ಮಗಳು ಯಾವುವೋ ತಿಳಿದಿಲ್ಲವಲ್ಲವೆ! ಈ ವಿಧವಾಗಿ ಧರ್ಮಗಳು ತಿಳಿದವರ ಸಂಖ್ಯೆ ಕಾಲಕ್ರಮದಲ್ಲಿ ಕಡಿಮೆಯಾಗಿ, ಅಧರ್ಮಗಳು ತಿಳಿದವರ ಸಂಖ್ಯೆ ಬೆಳೆದುಹೋಗುತ್ತದೆ. ನಾನು ಭಗವದ್ಗೀತೆಯನ್ನು ಓದಿದಾಗಲೇ ಅಂದರೆ ಸುಮಾರು 40 ವರ್ಷಗಳ ಕೆಳಗೆ ಶೇ. 90 ರಷ್ಟು ಅಧರ್ಮಗಳು ಭಗವದ್ಗೀತೆಯಲ್ಲಿ ಸೇರಿಹೋಗಿವೆಯೆಂದು ತಿಳಿದುಹೋಗಿದೆ.

**6) ಪ್ರಶ್ನೆ :– ಈ ದಿನ ಮನುಷ್ಯರಿಗೆ ಯಾವುದು ಧರ್ಮವೋ? ಯಾವುದು ಅಧರ್ಮವೋ ತಿಳಿದಿಲ್ಲ. ಹಾಗಿರುವಾಗ ನಿಮಗೆ ತಿಳಿದ ಒಂದು ಧರ್ಮ ಅಧರ್ಮವಾಗಿ ಹೇಗಿದೆಯೋ ತಿಳಿಸಿರಿ. ಧರ್ಮವಾಗಿ ಇರುವಾಗ ಹೇಗಿರಬೇಕು? ಅಧರ್ಮವಾಗಿ ಇರುವಾಗ ಹೇಗೆ ಇದೆ? ಒಂದು ವಿಷಯವನ್ನು ಹೇಳಿದರೇ ಅದನ್ನನುಸರಿಸಿ ಉಳಿದ ಧರ್ಮಗಳ ವಿಷಯ ಒಂದು ಅಂದಾಜಿಗೆ ಬರುತ್ತದೆ. ಆದ್ದರಿಂದ ನಿಮಗೆ ತಿಳಿದವುಗಳಲ್ಲಿ ಮುಖ್ಯವಾದದ್ದನ್ನು ಕುರಿತು ಹೇಳಿರಿ.**

**ಉತ್ತರ :–** ಈ ಪ್ರಶ್ನೆ ಎಲ್ಲರಿಗೂ ಅವಶ್ಯಕವಾದುದು. ಆದ್ದರಿಂದ ಈ ಉತ್ತರವನ್ನು ಎಲ್ಲರೂ ಗಮನಿಸಬೇಕಾಗಿದೆ. ಭಗವದ್ಗೀತಾ ಗ್ರಂಥದಲ್ಲಿ ಅತ್ಯಂತ ಮುಖ್ಯ ವಾಗಿರುವುದು ಆತ್ಮಗಳ ವಿಷಯ. ಭಗವದ್ಗೀತೆಯಲ್ಲಿ 14ನೇ ಅಧ್ಯಾಯದ ವರೆಗು ಆತ್ಮಗಳ ಕಾರ್ಯವನ್ನು ಹೇಳುತ್ತಾ ಹೋದ ಭಗವಂತನು 15ನೇ ಅಧ್ಯಾಯದವರೆಗು ಆತ್ಮಗಳೊಂದರ ವಿವರವನ್ನು ಹೇಳಲಿಲ್ಲ. ಆತ್ಮಗಳು ಎಷ್ಟಿವೆಯೆನ್ನುವ ವಿಷಯವನ್ನು ಹೇಳದಂತೆ ಆತ್ಮಗಳು ಮಾಡುವ ಕೆಲಸಗಳನ್ನು 14ನೇ ಅಧ್ಯಾಯದವರೆಗು ಹೇಳಿದ್ದಾನೆ. ಆದರೇ ಕುರಡರಂತೆ ಓದುವವರಿಗೆ ಆತ್ಮಗಳ ಮೇಲೆ ಧ್ಯಾಸ ಇರುವುದಿಲ್ಲ. ಹೇತುವಾದ ದೃಷ್ಠಿ ಇರುವವನಿಗೆ ಆತ್ಮ ಎಂದರೆ ಏನು? ಆತ್ಮಗಳು ಎಷ್ಟು? ಎನ್ನುವ ಪ್ರಶ್ನೆ ಬರಬಲ್ಲದು. ಅಂತಹವರಿಗೆ ಉತ್ತರವಾಗಿ ಹದಿನೈದನೇ ಅಧ್ಯಾಯದಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ 16,17 ಶ್ಲೋಕಗಳಲ್ಲಿ ಆತ್ಮಗಳ ವಿಷಯ ಹೇಳುವುದು ನಡೆದಿದೆ. ಹದಿನಾರನೇ ಶ್ಲೋಕದಲ್ಲಿ ಲೋಕದಲ್ಲಿ 'ಕ್ಷರನು', 'ಅಕ್ಷರನು' ಎನ್ನುವ ಇಬ್ಬರು ಪುರುಷರು ಇದ್ದಾರೆಂದು, ಅದರಲ್ಲಿ ಒಬ್ಬನು ಕ್ಷರನು, ಎರಡನೆಯವನು ಅಕ್ಷರನು ಎಂದು ಹೇಳಲಾಗಿದೆ. ಇದನ್ನನುಸರಿಸಿ ಪುರುಷರೆನ್ನುವವರಲ್ಲಿ ಎರಡು ವಿಧಗಳ ಪುರುಷರು ಇದ್ದಾರೆಂದು ತಿಳಿದುಹೋಗಿದೆ. ಆದರೇ ಆ ಇಬ್ಬರಲ್ಲಿ ಒಬ್ಬನು ಕ್ಷರನಾಗಿ ಇದ್ದಾನೆ. ಮತ್ತೊಬ್ಬನು ಅಕ್ಷರನಾಗಿ ಇದ್ದಾನೆ. ಕ್ಷರನು ಎಂದರೇ ನಾಶವಾಗುವವನೆಂದು ಅರ್ಥ. ಅಕ್ಷರನು ಎಂದರೇ ನಾಶವಾಗದವನೆಂದು ಅರ್ಥವಿದೆ. ಅಂದರೇ ಒಬ್ಬನು ಎಂದಿಗಾದರೂ ಇಲ್ಲದಂತೆ ಹೋಗುವವನೆಂದು, ಎರಡನೆಯವನು ಎಂದಿಗೂ ಎಲ್ಲಿಗೂ ಹೋಗದಂತೆ ನಾಶವಾಗದಂತೆ

ಸ್ಥಿರಸ್ಥಾಯಿಯಾಗಿ ಇರುವನೆಂದು ತಿಳಿಯುತ್ತಿದೆ. ಈ ಪುರುಷರ ವಿಷಯ ಭಗವದ್ಗೀತೆಯಲ್ಲಿ ಮೊದಲ ಅಧ್ಯಾಯದಿಂದ ಹೇಳಲ್ಪಡುತ್ತಿದ್ದರೂ ಹದಿನೈದನೇ ಅಧ್ಯಾಯದವರೆಗು ಎರಡು ವಿಧಗಳ ಪುರುಷರಿದ್ದಾರೆನ್ನುವುದು ತಿಳಿದಿಲ್ಲ.

ಇದಕ್ಕಿಂತ ಮೊದಲು ಹದಿನಾಲ್ಕನೇ ಅಧ್ಯಾಯವಾದ ಗುಣತ್ರಯ ವಿಭಾಗಯೋಗವೆನ್ನುವ ಅಧ್ಯಾಯದಲ್ಲಿ ಮೊದಲ 3, 4 ಶ್ಲೋಕಗಳಲ್ಲೇ ಪುರುಷನು, ಸ್ತ್ರೀ ಎನ್ನುವ ಇಬ್ಬರಿಂದಲೇ ಎಲ್ಲರೂ ಹುಟ್ಟುತ್ತಿದ್ದಾರೆಂದು ಹೇಳಿದ್ದಾರೆ. ಆದರೇ ಅದೇನು ಹೊಸ ವಿಷಯವಲ್ಲ ಎಂದು ನಾವು ಅಂದುಕೊಳ್ಳಬಹುದು. ಇಲ್ಲಿ ವಿಶೇಷವೇನೆಂದರೇ ನಮಗೆ ಇಲ್ಲಿಯವರೆಗು ತಿಳಿಯದ ವಿಷಯವನ್ನೇ ಅಲ್ಲಿ ಹೇಳಿದ್ದಾರೆ ಹೊರತು, ತಿಳಿದ ವಿಷಯವನ್ನು ಹೇಳಲಿಲ್ಲ. ಏಕೆಂದರೇ! ಪ್ರಪಂಚವೆಲ್ಲದಕ್ಕೂ ಒಬ್ಬನೇ ಪುರುಷನು, ಒಬ್ಬಳೇ ಸ್ತ್ರೀ ಇರುವಂತೆ ಹೇಳಿದ್ದಾರೆ. ಕಣ್ಣಿಗೆ ಕಾಣಿಸದ ದೇವರನ್ನು ಪುರುಷನೆಂದು, ಕಾಣಿಸುವ ಪ್ರಕೃತಿಯನ್ನು ಸ್ತ್ರೀಯೆಂದು ಹೇಳುವುದು ನಡೆದಿದೆ. ಸ್ತ್ರೀ ಪುರುಷರಿಂದ ಸಂತತಿ ಉಂಟಾಗುತ್ತಿದೆಯೆನ್ನುವ ನಮೂನೆಯನ್ನು ಮನುಷ್ಯರಲ್ಲಿ ಸ್ತ್ರೀ ಪುರುಷರನ್ನು ಏರ್ಪಡಿಸಿ ಅವರಿಗೆ ಸಂತತಿ ಉಂಟಾಗುವಂತೆ ಮಾಡಿದ್ದಾರೆ. ಹೊರಗೆ ಕಾಣಿಸುವ ಪುರುಷನೊಂದಿಗೆ ಸಂಬಂಧ ಹೊಂದಿರುವ ಸ್ತ್ರೀಗೆ ಪುರುಷನ ಬೀಜದಿಂದ ಸಂತತಿ ಉಂಟಾಗುತ್ತಿದೆಯೆಂದು ಎಲ್ಲರಿಗೂ ತಿಳಿದಿದೆ. ಆದರೇ ನಮಗೆ ತಿಳಿಯದ ಜ್ಞಾನವನ್ನು ತಿಳಿಸುವ ನಿಮಿತ್ತ ದೇವರು ನಿಜವಾದ ಪುರುಷನನ್ನು, ನಿಜವಾದ ಸ್ತ್ರೀಯನ್ನು ಈ ಅಧ್ಯಾಯದಲ್ಲಿ ಪರಿಚಯ ಮಾಡಿದ್ದಾನೆ. ನಿಜವಾದ ಪುರುಷನನ್ನು ಪುರುಷೋತ್ತಮನೆಂದು ಹದಿನೈದನೇ ಅಧ್ಯಾಯದಲ್ಲಿ ಹೇಳಿದ್ದಾನೆ.

ಕಾಣಿಸುವ ಪ್ರಕೃತಿ ಎನ್ನುವ ಸ್ತ್ರೀಗೆ ಪುರುಷನಾದ ದೇವರು ಬೀಜದಾತನಾಗಿ ಇದ್ದಾನೆಂದು, ದೇವರ ಬೀಜದಿಂದ ಪ್ರಕೃತಿ ಗರ್ಭಧರಿಸಿ ಸಮಸ್ತ ಜೀವರಾಶಿಗಳಿಗು ಹುಟ್ಟುವಿಕೆ ಕೊಡುತ್ತಿದೆಯೆಂದು, ಆದ್ದರಿಂದ ಸಮಸ್ತ ಜೀವರಾಶಿಗಳಿಗೂ ತಾಯಿ ಪ್ರಕೃತಿ ಆದಾಗ, ತಂದೆ ಪರಮಾತ್ಮ ಎಂದು ಹೇಳುವುದಾಗಿದೆ. ನಮ್ಮೆಲ್ಲರಿಗೂ ತಂದೆ ಪರಮಾತ್ಮಯೆಂದು ಆತನು ನಮ್ಮ ಶರೀರದಲ್ಲಿಯೇ ಕಾಣಿಸದ ಆತ್ಮವಾಗಿ ಇದ್ದಾನೆಂದು ತಿಳಿಯವುದೇ ಅಲ್ಲದೆ,

ಪ್ರಕೃತಿಯಿಂದ ತಯಾರಾದ ಶರೀರ ಸ್ತ್ರೀ ತತ್ತ್ವ ಹೊಂದಿದೆಯೆಂದು ಅರ್ಥವಾಗಿದೆ. ಒಬ್ಬ ಮನುಷ್ಯನನ್ನು ಜ್ಞಾನ ರೀತ್ಯಾ ಬೇರ್ಪಡಿಸಿ ನೋಡಿದರೇ ಪಂಚ ಭೂತ ನಿರ್ಮಾಣವಾದ ಅವನ ಶರೀರ ಪ್ರಕೃತಿಯಾದ ಸ್ತ್ರೀ ತತ್ತ್ವದೊಂದಿಗೆ ಕೂಡಿಕೊಂಡಿದೆಯೆಂದು, ಅವನೊಳಗಿರುವ ಚೈತನ್ಯ ಕಾಣಿಸದ ದೇವರಾಗಿ ಇದ್ದಾನೆಂದು ತಿಳಿಯುತ್ತಿದೆ. ಈ ವಿಧವಾಗಿ ಹದಿನಾಲ್ಕನೇ ಅಧ್ಯಾಯದಲ್ಲಿಯೇ ಪ್ರಕೃತಿ ಪರಮಾತ್ಮರು ಸ್ತ್ರೀ ಪುರುಷರಾಗಿ ಇದ್ದಾರೆಂದು, ಒಂದೇ ಶರೀರದಲ್ಲಿ ಪ್ರಕೃತಿ ಪುರುಷರು ಇಬ್ಬರೂ ಇದ್ದಾರೆಂದು ತಿಳಿದುಹೋಗಿದೆ. ಇನ್ನು ಹದಿನೈದನೇ ಅಧ್ಯಾಯವಾದ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16,17 ಶ್ಲೋಕಗಳಲ್ಲಿ ಪುರುಷನಾದ ದೇವರನ್ನು ಬೇರ್ಪಡಿಸಿ ಹೇಳುವುದಾಗಿದೆ. ಚೆನ್ನಾಗಿ ಗಮನಿಸಬೇಕಾದ ವಿಷಯವೇನೆಂದರೇ! ಈ ಶ್ಲೋಕಗಳಲ್ಲಿ ಒಬ್ಬ ಪುರುಷನನ್ನು ಕುರಿತು ಮಾತ್ರ ಹೇಳುವುದಾಗಿದೆ. ಸ್ತ್ರೀಯಾದ ಪ್ರಕೃತಿಯನ್ನು ಕುರಿತು ಏನೂ ಹೇಳಲಿಲ್ಲ. 17ನೇ ಶ್ಲೋಕದಲ್ಲಿ ಕ್ಷರನು, ಅಕ್ಷರನು ಎನ್ನುವ ಇಬ್ಬರು ಪುರುಷರೇ ಅಲ್ಲದೆ ಮೂರನೆ ಪುರುಷನಾದವನು ಪ್ರತ್ಯೇಕವಾಗಿದ್ದಾನೆಂದು, ಆತನೇ ಪರಮಾತ್ಮಯೆಂದು ಹೇಳಲ್ಪಡುತ್ತಿದ್ದಾನೆಂದು ಶ್ಲೋಕದಲ್ಲಿ ಇದೆ. 'ಪರಮಾತ್ಮ' ಎನ್ನುವ ಮೂರನೆ ಪುರುಷನು ಕ್ಷರ, ಅಕ್ಷರ ಇಬ್ಬರು ಪುರುಷರಿಗಿಂತ ಬೇರೆಯಾಗಿ ಇರುವುದಲ್ಲದೆ, ಅವರಿಗಿಂತ ಉತ್ತಮ ಪುರುಷನಾಗಿರುವುದರಿಂದ ಆತನನ್ನು ಪುರುಷೋತ್ತಮನೆಂದು ಅನ್ನಬೇಕಾಗಿ ಬಂದಿದೆಯೆಂದು ಸಹ ಹೇಳಿದ್ದಾರೆ. ಆ ಪುರುಷೋತ್ತಮನೇ ಸರ್ವಲೋಕಗಳಿಗು ದೇವರೆಂದು ಸಹ ಹೇಳಿದ್ದಾರೆ. ಇದು 16, 17 ಶ್ಲೋಕಗಳಲ್ಲಿರುವ ಸಾರಾಂಶ, ಅಲ್ಲಿ ದೇವರು ಹೇಳಿರುವ ಸಮಾಚಾರ ಅಷ್ಟೇ ಇದೆ. ಆದರೇ ಆ ಶ್ಲೋಕಗಳನ್ನು ಓದಿದ ಮನುಷ್ಯ ಮೂರು ಆತ್ಮಗಳನ್ನು ಅರ್ಥಮಾಡಿಕೊಳ್ಳಲಾರದೇ, ಮೂರು ಆತ್ಮಗಳ ವಿಷಯ ತನ್ನ ಬುದ್ಧಿ ಗ್ರಾಹಿತಕ್ಕೆ ಬಾರದಿರುವುದರಿಂದ ತಪ್ಪಾಗಿ ಅರ್ಥಮಾಡಿಕೊಳ್ಳುವುದು ನಡೆದಿದೆ. ಧರ್ಮವನ್ನು ಬಿಟ್ಟು ಅಧರ್ಮದೊಳಗೆ ಹೋದಂತಾಗಿದೆ.

ಭಗವದ್ಗೀತೆಯಲ್ಲಿ ಆತ್ಮಗಳ ವಿಷಯ ಬಹಳ ಮುಖ್ಯವಾದ ಧರ್ಮವಾಗಿ ಇದೆ. ದೇವರ ಧರ್ಮಗಳೆಲ್ಲವುಗಳ ಪೈಕಿ ಉತ್ತಮವಾದ ಧರ್ಮ, ದೊಡ್ಡ

ಧರ್ಮ ಆತ್ಮಗಳ ವಿವರವೇಯೆಂದು ತಿಳಿಯಬೇಕು. ಅಷ್ಟು ಮುಖ್ಯವಾದ ಧರ್ಮವನ್ನು ದೇವರು ಅಲ್ಲಿ ತಿಳಿಸಿರುವಾಗ, ಬೋಧಕರೆಲ್ಲರೂ ಆ ವಿಷಯವನ್ನು ಅರ್ಥಮಾಡಿಕೊಳ್ಳಲಾರದೆ ಹೋಗಿದ್ದಾರೆ. ಮೊದಲು ಒಬ್ಬ ಬೋಧಕನು ಅದನ್ನು ತಪ್ಪು ಭಾವನೆಯೊಂದಿಗೆ ಗ್ರಹಿಸಿದಾಗ, ಉಳಿದವರೆಲ್ಲರೂ ಆತನನ್ನೇ ಅನುಸರಿಸಿ ತಪ್ಪು ಭಾವನೆಯೊಳಗೇ ಹೋಗಿದ್ದಾರೆ. ಒಟ್ಟಾರೆ ಮುನ್ನೂರ ಇಪ್ಪತ್ತು ಭಗವದ್ಗೀತೆಗಳಲ್ಲಿಯೂ ಅಲ್ಲಿರುವ ಧರ್ಮವನ್ನು ಅಧರ್ಮವಾಗಿ ಬದಲಾಯಿಸಿ ಹೇಳುವುದಾಗಿದೆ. ಈಗ ಆ ಶ್ಲೋಕಗಳನ್ನು ಇಲ್ಲಿ ಹೇಳಿಕೊಂಡು ನೋಡೋಣ. ಅವುಗಳಲ್ಲಿ ಯಾವುದೇ ಪ್ರಕೃತಿ ವಿಷಯ ಪ್ರಸ್ತಾವನೆಗೆ ಬರಲಿಲ್ಲ. ಇರುವುದೆಲ್ಲಾ ಆತ್ಮಗಳ ವಿಷಯವೇ ಇದೆ. ಹಾಗಿರುವಾಗ ಮೂವರು ಪುರುಷರ ಸ್ಥಾನದಲ್ಲಿ ಒಂದು ಪ್ರಕೃತಿಯನ್ನು ಸೇರಿಸಿ ಉಳಿದ ಇಬ್ಬರನ್ನು ಪುರುಷರಾಗಿ ಹೇಳಿದ್ದಾರೆ. ಪ್ರಕೃತಿ ಎಂದರೆ ಸ್ತ್ರೀ ತತ್ತ್ವ. ಸ್ತ್ರೀ ತತ್ತ್ವವಾದಪ್ರಕೃತಿಯನ್ನು ಪುರುಷರಲ್ಲಿ ಸೇರಿಸುವುದು, ಅಲ್ಲಿ ಕೇವಲ ಇಬ್ಬರು ಪುರುಷರನ್ನು ಮಾತ್ರ ಹೇಳಿ ಒಂದು ಸ್ಥಾನದಲ್ಲಿ ಪ್ರಕೃತಿಯನ್ನು ಹೇಳುವುದರಿಂದ ಅಲ್ಲಿ ದೇವರು ಹೇಳಿದ ಧರ್ಮ ಅಧರ್ಮವಾಗಿ ಬದಲಾಗಿಹೋಗಿದೆ. ಮನುಷ್ಯರು ಮಾಡಿದ ತಪ್ಪನ್ನು ಪ್ರತ್ಯಕ್ಷವಾಗಿ ತಿಳಿಯುವುದಕ್ಕೆ ಮೊದಲು ಅಲ್ಲಿರುವ ಶ್ಲೋಕಗಳನ್ನು ಉಳಿದ ಬೋಧಕರು ಬರೆದ ವಿಧಾನವನ್ನು ಈಗ ನೋಡೋಣ.

**ಶ್ಲೋ॥ 16.** **ದ್ವಾವಿಮೌ ಪುರುಷೌ ಲೋಕೇ ಕ್ಷರ ಶ್ಚಾಕ್ಷರ ಏವಚ ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ ॥**

**ಭಾವಾರ್ಥ :–** ಪ್ರಪಂಚದಲ್ಲಿ ಕ್ಷರನೆಂದೂ, ಅಕ್ಷರನೆಂದೂ ಹೆಸರುಗಳಿರುವ ಇಬ್ಬರು ಪುರುಷರು ಇದ್ದಾರೆ. ಬ್ರಹ್ಮಾದಿ ಸ್ಥಾವರಾಂತಗಳಾದ ಶರೀರಗಳ ಸಮುದಾಯ ಕ್ಷರ ಎಂದೂ (ನಶಿಸುವುದೆಂದೂ), ಕೂಟಸ್ಥನು ಚತುರ್ವಿಂಶದ ತತ್ತ್ವಗಳಿಗೆ ಅತೀತನಾಗುವ ಜೀವಿಯು ಅಥವಾ ಭಗವನ್ಮಾಯಾ ಶಕ್ತಿ ಅಕ್ಷರನೆಂದೂ ಹೇಳಲ್ಪಡುತ್ತಿದ್ದಾನೆ.

**ಶ್ಲೋ॥ 17. ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**

**ಯೋಲೋಕತ್ರಯ ಮಾ ವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**

**ಭಾವಾರ್ಥ :–** ನಾಶನ ರಹಿತನಾದ ಯಾವ ಈಶ್ವರನು ಮೂರುಲೋಕಗಳನ್ನು ಪ್ರವೇಶಿಸಿ ಭರಿಸುತ್ತಿದ್ದಾನೋ, ಅಂತಹ ಕ್ಷರಾಕ್ಷರರಿಗಿಂತ ಬೇರೆಯಾದ ಪುರುಷನು, ಆ ಉಭಯರಿಗಿಂತ ಶ್ರೇಷ್ಠನು, ಅವನೇ ಪರಮಾತ್ಮ ಎಂದು ಹೇಳಲ್ಪಡುತ್ತಿದ್ದಾನೆ.

*(ಈ ಎರಡು ಶ್ಲೋಕಗಳು ಏರ್ಪೇಡು ಆಶ್ರಮ (ಚಿತ್ತೂರು ಜಿಲ್ಲೆ) 1968ನೆ ವರ್ಷದಲ್ಲಿ ಶ್ರೀ ಮಳಯಾಳ ಸ್ವಾಮಿಯವರಿಂದ ಬರೆಯಲ್ಪಟ್ಟ "ಶ್ರೀ ಮದ್ಭಗವದ್ಗೀತಾ" ಎನ್ನುವ ಗ್ರಂಥದಿಂದ ಶೇಖರಿಸಿ ಇಲ್ಲಿ ಜೋಡಿಸಿದ್ದೇವೆ. ಒಂದು ವಿಧವಾಗಿ ಹೇಳಿದರೆ ಆಂಧ್ರ ರಾಜ್ಯಕ್ಕೆ ತೆಲುಗುದಲ್ಲಿ ಭಗವದ್ಗೀತೆಯನ್ನು ಪರಿಚಯ ಮಾಡಿದವರಲ್ಲಿ ಮಳಯಾಳ ಸ್ವಾಮಿಯವರು ಮುಖ್ಯನು, ಮೊದಲನೆಯವನೆಂದು ಹೇಳಬಹುದು. ಅದಕ್ಕು ಮೊದಲು ಕೆಲವರು ಬರೆದರೂ ಅವು ಎಲ್ಲವೂ ಪ್ರಜೆಗಳ ಮಧ್ಯದೊಳಗೆ ಬರಲಿಲ್ಲ. ಹೆಚ್ಚಾಗಿ ಪ್ರಜೆಗಳ ಮಧ್ಯದೊಳಗೆ ಬಂದು ಚೆನ್ನಾಗಿ ಪ್ರಚಾರವಾದ ಭಗವದ್ಗೀತೆಗಳಲ್ಲಿ ಮುಖ್ಯವಾಗಿ ಮಳಯಾಳಸ್ವಾಮಿಯವರ ಭಗವದ್ಗೀತೆಯೇ ಎಂದು ಹೇಳಬಹುದು. ಆಂಧ್ರ ರಾಷ್ಟ್ರದಲ್ಲಿ ಒಂದು ಸಮಯದಲ್ಲಿ ಮಳಯಾಳಸ್ವಾಮಿ ಚೆನ್ನಾಗಿ ಪ್ರಚಾರದಲ್ಲಿ ಇರುತ್ತಿದ್ದರು. ಆತನು ದೊಡ್ಡ ಜ್ಞಾನಿ ಎಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಅಷ್ಟು ದೊಡ್ಡ ಸ್ವಾಮೀಜೀ ಹೇಳಿದ ಜ್ಞಾನವನ್ನು ಎಲ್ಲರು ಪೂರ್ತಿಯಾಗಿ ವಿಶ್ವಾಸಿಸುತ್ತಿದ್ದರು. ಆತನ ನಂತರ ಆತನ ಶಿಷ್ಯನಾದ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಯವರು "ಗೀತಾ ಮಕರಂದ" ಎನ್ನುವ ದೊಡ್ಡ ಭಗವದ್ಗೀತೆಯನ್ನು ಬರೆದು ಪ್ರಚಾರ ಮಾಡಿದ್ದಾರೆ. ಎಲ್ಲವುಗಳಿಗಿಂತ ದೊಡ್ಡ ಭಗವದ್ಗೀತೆ ಆಗಿರುವುದರಿಂದ ಬಹಳ ಜನ ಗೀತಾ ಮಕರಂದವನ್ನು ಕೊಂಡು ಮನೆಯಲ್ಲಿಟ್ಟುಕೊಂಡಿದ್ದಾರೆ. ಮಳಯಾಳ ಸ್ವಾಮಿಯವರು ಬ್ರಾಹ್ಮಣರಾಗಿದ್ದು, ಆತನ ಶಿಷ್ಯನು ವಿದ್ಯಾ ಪ್ರಕಾಶಾನಂದಗಿರಿ ಸ್ವಾಮಿಯವರು ವೈಶ್ಯರು ಆಗಿರುವುದರಿಂದ ಆರ್ಯ ವೈಶ್ಯ ಸಂಘದವರು ವಿದ್ಯಾ ಪ್ರಕಾಶಾನಂದಗಿರಿ ಸ್ವಾಮಿ ಬರೆದ ಗೀತಾ ಮಕರಂಧವನ್ನು ಹೆಚ್ಚಾಗಿ ಪ್ರಚಾರ ಮಾಡಿದ್ದಾರೆ. ಮೇಲೆ ಬರೆದ ಶ್ಲೋಕಗಳ ಭಾವಾರ್ಥಗಳು ಮಳಯಾಳ ಸ್ವಾಮಿಯವರು ಬರೆದಿರುವವು ಆದಾಗ ಈಗ ಕೆಳಗೆ ಬರೆಯಲ್ಪಡುವ ಭಾವಾರ್ಥಗಳು ವಿದ್ಯಾ ಪ್ರಕಾಶಾನಂದ ಸ್ವಾಮಿಯವರವೆಂದು ತಿಳಿಸುತ್ತಿದ್ದೇವೆ.)*

**16ನೇ ಶ್ಲೋಕವೊಂದರ ಭಾವಾರ್ಥ :–** ಸಮಸ್ತ ಪ್ರಪಂಚದಲ್ಲಿ ಕ್ಷರನೆಂದು, ಅಕ್ಷರನೆಂದು ಇಬ್ಬರು ಪುರುಷರು ಇದ್ದಾರೆ. ಅದರಲ್ಲಿ ಸಮಸ್ತ ಪ್ರಾಣಿಗಳೊಂದರ ದೇಹಗಳು (ಉಪಾದಿಗಳು) ಕ್ಷರನೆಂದು, ಕೂಟಸ್ಥನಾದ ಜೀವಿಯು ಅಕ್ಷರನೆಂದು ಹೇಳಲ್ಪಡುತ್ತಿದ್ದಾರೆ.

**ಪ್ರಶ್ನೆ :– ಈ ಪ್ರಪಂಚದಲ್ಲಿ ಪುರುಷರು ಎಷ್ಟು ಜನರಿದ್ದಾರೆ.**

**ಉತ್ತರ :–** ಇಬ್ಬರು ಇದ್ದಾರೆ. 1) ಕ್ಷರನು, 2) ಅಕ್ಷರನು.

**ಪ್ರಶ್ನೆ :– ಅದರಲ್ಲಿ ಕ್ಷರ ಪುರುಷನು ಯಾರು?**

**ಉತ್ತರ :–** ಸಮಸ್ತ ಪ್ರಾಣಿಗಳೊಂದರ ದೇಹಗಳನ್ನು ಕ್ಷರ ಪುರುಷನೆಂದು ಹೇಳಲ್ಪಡುತ್ತಿದ್ದಾನೆ.

**ಪ್ರಶ್ನೆ :– ಅಕ್ಷರ ಪುರುಷನು ಯಾರು?**

**ಉತ್ತರ :–** ಕೂಟಸ್ಥನಾದ ಜೀವಿಯು .

**17ನೇ ಶ್ಲೋಕವೊಂದರ ಭಾವಾರ್ಥ :–** ಯಾರು ಮೂರು ಲೋಕಗಳಲ್ಲಿ ಪ್ರವೇಶಿಸಿ ಅವುಗಳನ್ನು ಭರಿಸುತ್ತಿದ್ದಾನೋ, ಅಂತಹ ನಾಶನ ರಹಿತನನ್ನು, ಜಗನ್ನಿಯಾಮಕನು, ಮೇಲೆ ಹೇಳಿರುವ ಇಬ್ಬರು ಪುರುಷರಿಗಿಂತ ಬೇರೆಯಾದವನು ಆದ ಉತ್ತಮ ಪುರುಷನು ಪರಮಾತ್ಮಯೆಂದು ಹೇಳಲ್ಪಡುತ್ತಿದ್ದಾನೆ.

**ಪ್ರಶ್ನೆ :– ಈ ಕ್ಷರಾಕ್ಷರರಿಗಿಂತ ಬೇರೆಯಾದವನು ಯಾರಾದರೂ ಇದ್ದಾರಾ?**

**ಉತ್ತರ :–** ಇದ್ದಾನೆ. ಆತನೇ ಉತ್ತಮ ಪುರುಷನು (ಪುರುಷೋತ್ತಮನು).

**ಪ್ರಶ್ನೆ :– ಪುರುಷೋತ್ತಮನೆಂತಹವನು?**

**ಉತ್ತರ :–** ಮೂರು ಲೋಕಗಳನ್ನು ಭರಿಸುವವನು, ಜಗನ್ನಿಯಾಮಕನು, ನಾಶನ ರಹಿತನು.

**ಪ್ರಶ್ನೆ :– ಆದ್ದರಿಂದ ಫಲಿತಾಂಶವೇನು**?

**ಉತ್ತರ :–** ಕ್ಷರ (ದೇಹ), ಅಕ್ಷರ (ಜೀವ), ಭಾವನೆಗಳನ್ನು ದಾಟಿ ಪುರುಷೋತ್ತಮ ಭಾವನೆಯನ್ನು ಅವಲಂಭಿಸಬೇಕು.

ಆಂಧ್ರರಾಷ್ಟ್ರದಲ್ಲಿ ಒಳ್ಳೆಯ ಹೆಸರಿರುವ ಸ್ವಾಮಿಗಳು ವಿದ್ಯಾಪ್ರಕಾಶಾ ನಂದಗಿರಿ ಸ್ವಾಮಿಯವರು, ಆತನ ಗುರುಗಳಾದ ಮಳಯಾಳ ಸ್ವಾಮಿಯವರು. ಇವರು ಬರೆದ ಗೀತಾ ಮಕರಂದ, ಶ್ರೀ ಮದ್ಭಗವದ್ಗೀತಾ ಎರಡು ಗ್ರಂಥಗಳು ಒಳ್ಳೆಯ ಹೆಸರು ಪಡೆದ ಗ್ರಂಥಗಳೇ. ಈಗ ಬರೆದು ತೋರಿಸಿದ ಎರಡು ಶ್ಲೋಕಗಳ ಭಾವನೆಗಳು ಆ ಎರಡು ಗ್ರಂಥಗಳೊಳಗಿನವೇ. ಇಲ್ಲಿ ಅವರು ಬರೆದಿರುವುದನ್ನನುಸರಿಸಿ ಕ್ಷರನೆಂದರೇ ನಾಶವಾಗುವವನೆಂದು ಅರ್ಥ. ನಾಶವಾಗುವುದು ಶರೀರವೇ ಆದ್ದರಿಂದ ಶರೀರವನ್ನು ಕ್ಷರನೆಂದು ಹೇಳಿದ್ದಾರೆ. ಮರಣಿಸಿದಾಗ ಶರೀರ ನಶಿಸಿದರೂ, ತಾನು ನಶಿಸದೇ ಬೇರೊಂದು ಜನ್ಮಕ್ಕೆ ಹೋಗುವ ಜೀವಿಯನ್ನು ಅಕ್ಷರನೆಂದು ಅನ್ನುತ್ತಿದ್ದಾರೆಂದು ಬರೆಯುವುದು ನಡೆದಿದೆ. ಇವರೇ ಅಲ್ಲ ಬಹಳ ಜನ ಅವರು ಬರೆದ ಭಗವದ್ಗೀತೆಗಳಲ್ಲಿ ಸಹ ಇದೇ ವಿಷಯವನ್ನೇ ತಿಳಿಸುವುದಾಗಿದೆ.

16, 17 ಶ್ಲೋಕಗಳನ್ನು ಹೇಗೆ ಪರಿಶೋಧಿಸಿದರೂ ಅಲ್ಲಿ ಮೂರು ಆತ್ಮಗಳನ್ನು ಮುವ್ವರು ಪುರುಷರೆಂದು ಹೇಳಿದ್ದಾರೆ. ಅದರಲ್ಲಿ ನಾಶವಾಗುವವನು ಜೀವಾತ್ಮಯೆಂದು ಹೇಳದೇ, ನಾಶವಾಗುವುದು ಶರೀರ ಎಂದಿದ್ದಾರೆ. ಮರಣದಲ್ಲಿ ನಾಶವಾಗುವುದು ಶರೀರ. ನಾಶವಾಗದವನು ಜೀವಿಯು (ಜೀವಾತ್ಮ) ಎನ್ನುವ ಮಾತು ವಾಸ್ತವವೇ ಆದರೂ ಜೀವಿಯು ಅಕ್ಷರನಲ್ಲ. ಜೀವಿಯು ಕೊನೆಯಲ್ಲಿ ಯಾವಾಗಾದರೂ ನಾಶವಾಗಬೇಕಾದವನೆ. ಜ್ಞಾನವನ್ನು ತಿಳಿದ ಜೀವಿಯು ಕರ್ಮರಾಹಿತ್ಯವನ್ನು ಹೊಂದಿದಾಗ, ಕರ್ಮವಿಲ್ಲದ ಕಾರಣದಿಂದ ಜೀವಿಯು ನಾಶವಾಗಿ ಹೋಗಿ ದೇವರಾಗಿ ಬದಲಾಗಿ ಹೋಗುತ್ತಾನೆ. ಜೀವಿಯು ಜೀವಿಯಾಗಿ ನಾಶವಾದಾಗ ದೇವರಾಗಿ ಬದಲಾಗಬಲ್ಲನು, ಅದೇ ಮೋಕ್ಷ. ಒಬ್ಬ ಜೀವಿಯು ಗುರುವಿಗೆ ನಮಸ್ಕರಿಸಿ ನನಗೆ ಮೋಕ್ಷವನ್ನು ಪ್ರಸಾದಿಸೆಂದು

ಕೋರಿದಾಗ ಗುರುವು **"ನೀನು ನಾಶವಾಗಿ ಹೋಗು"** ಎಂದು ಆಶೀರ್ವದಿಸಿದನಂತೆ. ಜೀವಿಯು ನಶಿಸಿದರೇ ದೇವರಾಗಿ ಬದಲಾಗುತ್ತಾನೆಂದು ಅದೇ ಮೋಕ್ಷವೆಂದು ತಿಳಿಸುವ ನಿಮಿತ್ತ ಗುರುವು ಶಿಷ್ಯನನ್ನು ಹಾಗೆ ಆಶೀರ್ವದಿಸಿದನಂತೆ. ಶರೀರ ಪ್ರಕೃತಿಯೊಂದಿಗೆ ತಯಾರಾಗಿರುವುದು ಸ್ತ್ರೀ ತತ್ತ್ವವಿರುವುದು. ಇಲ್ಲಿ ಎರಡು ಶ್ಲೋಕಗಳಲ್ಲಿ ಹೇಳಿರುವುದು ಪುರುಷರನ್ನು ಕುರಿತೇ ಹೊರತು, ಸ್ತ್ರೀಯನ್ನು ಕುರಿತು ಅಲ್ಲ. ಹಾಗಿರುವಾಗ ಸ್ತ್ರೀ ತತ್ತ್ವವಾದ ಪ್ರಕೃತಿಯನ್ನು ಈ ಶ್ಲೋಕ ಭಾವನೆಗಳಲ್ಲಿ ಹೇಳುವುದು ಪೂರ್ತಿ ತಪ್ಪಾಗುತ್ತದೆ. ಶ್ಲೋಕಗಳಲ್ಲಿ ಎಲ್ಲೇ ಆಗಲಿ ಪ್ರಕೃತಿ ಪ್ರಸ್ತಾವನೆಯೇ ಇಲ್ಲ. ಪುರುಷರನ್ನು ಕುರಿತು ಇದೆ. ಈ ಎರಡು ಶ್ಲೋಕಗಳ ಭಾವನೆಯಲ್ಲಿ ಪುರುಷರನ್ನು ಕುರಿತೇ ಹೇಳಬೇಕು. ಹಾಗಲ್ಲದೇ ಪ್ರಕೃತಿಯೊಂದಿಗೆ ತಯಾರಾದ ದೇಹಗಳನ್ನು ಹೇಳುವುದರಿಂದ ಪ್ರಕೃತಿಯನ್ನು ಹೇಳಿದಂತಾಗಿದೆ. ಈ ರೀತಿ ಪುರುಷರ ಸ್ಥಾನದಲ್ಲಿ ಪುರುಷರನ್ನು ಕುರಿತು ಹೇಳದೇ ಸ್ತ್ರೀಯನ್ನು ಕುರಿತು ಅಂದರೇ ಪ್ರಕೃತಿಯನ್ನು ಕುರಿತು ಹೇಳುವುದು ಧರ್ಮವಿರುದ್ಧವಾಗುತ್ತದೆ. ಇಲ್ಲಿಯೇ ಧರ್ಮ ಅಧರ್ಮವಾಗಿ ಬದಲಾಗಿ ಹೋಗುತ್ತಿದೆ. ಚೆನ್ನಾಗಿ ಹೆಸರು ಪಡೆದ ಸ್ವಾಮೀಜಿಗಳ ಗ್ರಂಥಗಳಲ್ಲಿ ಜೀವಾತ್ಮವನ್ನು ಕುರಿತು ಹೇಳಬೇಕಾದ ಕಡೆ ಪ್ರಕೃತಿಜನಿತವಾದ ಶರೀರವನ್ನು ಹೇಳುವುದು ದೊಡ್ಡ ತಪ್ಪು. ಅಕ್ಷರ ಪುರುಷನಾದ ಆತ್ಮನನ್ನು ಕುರಿತು ಹೇಳಬೇಕಾದ ಕಡೆ ಜೀವಾತ್ಮನನ್ನು ಕುರಿತು ಹೇಳುವುದುಮತ್ತಷ್ಟು ತಪ್ಪಾಗುತ್ತದೆ. ಹಾಗೆ ಹೇಳುವುದರಿಂದ ಕೂಡಲೇ ಯಾರಿಗೂ ನಷ್ಟ, ಕಷ್ಟ ಬರುವುದಿಲ್ಲ. ಆದರೆ ನಮಗೆ ತಿಳಿಯದಂತೆ ಧರ್ಮ ಅಧರ್ಮವಾಗಿ ಬದಲಾಗಿ ಹೋಗುತ್ತದೆ. ಧರ್ಮವೊಂದರ ಸ್ಥಾನದಲ್ಲಿ ಅಧರ್ಮ ಬರುವುದರಿಂದ ದೇವರ ಜ್ಞಾನ ತಿಳಿದಂತೇ ಇರುತ್ತದೆ ಆದರೆ, ದೇವರ ಜ್ಞಾನವೊಂದರ ದಾರಿ ಪೂರ್ತಿ ತಿಳಿಯದಂತೆ ಹೋಗುತ್ತದೆ. ದೇವರ ಜ್ಞಾನ ತಿಳಿಯದಂತೆ ಹೋಗುವುದರಿಂದ ದೇವರು ತಿಳಿಯದಂತೆ ಹೋಗುತ್ತಾನೆ. ದೇವರು ತಿಳಿದಾಗಲೇ ಮುಕ್ತಿ. ಮುಕ್ತಿ ಪಡೆದಾಗಲೇ ದೇವರು ತಿಳಿಯುತ್ತಾನೆ. ಆದ್ದರಿಂದ ಮುಕ್ತಿ ಬರುವುದಿಲ್ಲ, ದೇವರು ತಿಳಿಯುವುದಿಲ್ಲ. ದೇವರು ಹೇಳಿದ ಜ್ಞಾನವನ್ನು ಸರಿಯಾಗಿ ಗ್ರಹಿಸಿಕೊಳ್ಳದವನು ತನಗೆ ತಿಳಿದಿರುವುದೇ ನಿಜವಾದ

ಜ್ಞಾನ ಎಂದುಕೊಳ್ಳುತ್ತಿರುತ್ತಾನೆ. ಅಂತಹವನಿಗೆ ದೇವರೇ ಇಳಿದು ಬಂದು ಹೇಳಿದರೂ ಅರ್ಥಮಾಡಿಕೊಳ್ಳಲಾರದ ಸ್ಥಿತಿ ಯಲ್ಲಿರುತ್ತಾನೆ. ಅವಗಾಹನ ಲೋಪವಿರುವಾಗ ಧರ್ಮಗಳು ಸುಲಭವಾಗಿ ಅಧರ್ಮವಾಗಿ ಹೋಗುತ್ತವೆ.

**7) ಪ್ರ :– ದೇವರು ಹೇಳಿದ ಜ್ಞಾನವನ್ನು ಅಂದರೆ ದೈವಗ್ರಂಥಗಳಲ್ಲಿನ ಜ್ಞಾನವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕೆಂದರೇ ಏನು ಮಾಡಬೇಕು?**

**ಉತ್ತರ :–** ದೇವರ ಮೇಲೆ, ದೇವರ ಜ್ಞಾನದ ಮೇಲೆ ಶ್ರದ್ಧೆಯನ್ನು ಬೆಳೆಸಿಕೊಳ್ಳಬೇಕು.

**8) ಪ್ರ :– ದೇವರ ಮೇಲೆ ಶ್ರದ್ಧೆಯನ್ನು ಬೆಳೆಸಿದರೇ ದೈವ ಗ್ರಂಥದಲ್ಲಿನ ವಾಕ್ಯಗಳು ಮೊದಲು ತಪ್ಪಾಗಿ ಅರ್ಥವಾಗಿರುವವು, ಎರಡನೆ ಬಾರಿ ಸರಿಯಾಗಿ ಅರ್ಥ ವಾಗುತ್ತವಾ?**

**ಉತ್ತರ :–** ಒಂದು ಬಾರಿ ಅರ್ಥವಾಗಿರುವುದು ಹಾಗೆಯೇ ಇರುತ್ತದೆ, ತನ್ನಷ್ಟಕ್ಕೆ ತಾನೆ ಭಾವನೆ ಬದಲಾಗುವುದಿಲ್ಲ. ಆದರೇ ಜ್ಞಾನದ ಮೇಲೆ ಶ್ರದ್ಧೆಯನ್ನು ಬೆಳಸಿಕೊಂಡಂತಾದರೆ ಇತರರು ಹೇಳುವ ಮಾತು ಸರಿಯಾಗಿರುವುದೆಂದು, ಅಲ್ಲಿಯವರೆಗು ತನಗೆ ಅರ್ಥವಾಗಿರುವುದು ಸರಿಯಲ್ಲದ ಅಧರ್ಮವೆಂದು ತಿಳಿಯುತ್ತದೆ. ಆಗ ಅಧರ್ಮದಿಂದ ಧರ್ಮದೊಳಗೆ ಬದಲಾಗುವುದಕ್ಕೆ ಅವಕಾಶವಿದೆ.

**9) ಪ್ರ :– ಪ್ರಸ್ತುತ ಕಾಲದಲ್ಲಿರುವ ಮೂರು ಮತಗಳಲ್ಲಿ ಯಾವುದರಲ್ಲಿ ಧರ್ಮಗಳು ಇವೆ?**

**ಉತ್ತರ :–** ಮೂರು ಮತಗಳಲ್ಲಿ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ಇವೆ.

**10) ಪ್ರ :– ಹಿಂದೂ ಮತದಲ್ಲಿ ಅಧರ್ಮಗಳು ಬಂದು ಹಿಂದೂಗಳಲ್ಲಿ ಸೇರಿಹೋಗಿ, ಹಿಂದೂಗಳು ಒಬ್ಬ ದೇವರನ್ನು ಮುಗಿಯದೇ ಅನೇಕ ದೇವತೆಗಳನ್ನು ಮುಗಿಯುತ್ತಿದ್ದಾರೆ. ಹಾಗಲ್ಲದೆ ಒಂದೇ ದೇವರನ್ನು ವಿಶ್ವಾಸಿಸಿ, ಒಂದೇ ದೇವರನ್ನು ಪ್ರಾರ್ಥನೆ ಮಾಡುವ ಮುಸ್ಲಿಮ್‌ರು ಧರ್ಮದಲ್ಲಿ ಇದ್ದಂತೇ ಅಲ್ಲವೆ! ಅವರಿಗಿರುವ**

**ವಿಶ್ವಾಸ ಚಲಿಸದಂತಿರುವುದು. ಅಂತಹ ವಿಶ್ವಾಸ ಇರುವವರು ಧರ್ಮಗಳನ್ನು ತಿಳಿದವರೇ ಅಲ್ಲವೆ!**

**ಉತ್ತರ :- ವಿಶ್ವಾಸಕ್ಕೂ ಧರ್ಮಕ್ಕೂ ಸಂಬಂಧ ಇರುವುದಿಲ್ಲ.** ವಿಶ್ವಾಸ ದೇವರು ದೊಡ್ಡವನೆಂದು ಹೇಳುವುದು. ದೇವರು ಹೊರತು ಇತರರು ಯಾರೂ ದೊಡ್ಡವರಲ್ಲ ಎಂದು ಹೇಳುವುದು. ಎಲ್ಲದಕ್ಕೂ ಮೂಲ ಕಾರಣ ದೇವರೆಂದು ಹೇಳಬಹುದು. ಅಷ್ಟೇ ಹೊರತು ದೇವರು ಹೇಗೆ ದೊಡ್ಡವನೋ ವಿಶ್ವಾಸದಿಂದ ತಿಳಿಯುವುದಿಲ್ಲ. ದೇವರು ಎಲ್ಲರಿಗಿಂತ ದೊಡ್ಡವನು ಎಂದು ವಿಶ್ವಾಸದಿಂದ ಹೇಳಬಹುದು ಆದರೆ, ದೇವರು ಹೇಗೆ ದೊಡ್ಡವನೋ ಹೇಳಲಾರೆವು. ಅವುಗಳಲ್ಲಿನ ಯಥಾರ್ಥ ತಿಳಿದಿಲ್ಲ. ಈ ವಿಧವಾಗಿ ಯಥಾರ್ಥ ವಿಷಯ ವಿಶ್ವಾಸದಿಂದ ತಿಳಿಯುವುದಿಲ್ಲ. ವಿಶ್ವಾಸ ಎನ್ನುವುದು ನಂಬಿಕೆ ಮಾತ್ರವೇ. ಜ್ಞಾನ ಎನ್ನುವುದು ನಂಬಿಕೆಯಲ್ಲ, ಯಥಾರ್ಥ. ದೇವರನ್ನು ಕುರಿತು ಯಥಾರ್ಥ ತಿಳಿಯಬೇಕೆಂದರೇ ಮೊದಲು ಶ್ರದ್ಧೆ ಅವಶ್ಯ. ಶ್ರದ್ಧೆ ಇರುವಾಗಲೇ ಯಾವುದೋ ಒಂದು ವಿಧವಾಗಿ ದೇವರು ತನ್ನ ಜ್ಞಾನವನ್ನು ತಿಳಿಸುವನು. ಆದ್ದರಿಂದ ಭಗವದ್ಗೀತೆಯಲ್ಲಿ ಭಗವಂತನು **"ಶ್ರದ್ಧಾವಾನ್ ಲಭತೇ ಜ್ಞಾನಮ್"** ಎಂದು ತನ್ನ ಶ್ಲೋಕದಲ್ಲಿ ಹೇಳಿದ್ದಾನೆ.

**11) ಪ್ರಶ್ನೆ :- ಶ್ರದ್ಧೆ ಬೇಕೆಂದರೇ ಏನು ಮಾಡಬೇಕು?**

**ಉತ್ತರ :-** ಶ್ರದ್ಧೆಗಳು ಎರಡು ವಿಧಗಳಲ್ಲಿ ಇವೆ. ಒಂದು ಪ್ರಪಂಚ ಶ್ರದ್ಧೆ, ಎರಡು ಪರಮಾತ್ಮ ಶ್ರದ್ಧೆ. ಈ ಎರಡರಲ್ಲಿ ಪ್ರಪಂಚ ಶ್ರದ್ಧೆ ಅವನ ಕರ್ಮವನ್ನನುಸರಿಸಿ ಇರುತ್ತದೆ. ಪರಮಾತ್ಮನ ಮೇಲೆ ಶ್ರದ್ಧೆ ಕರ್ಮಾಧೀನದಲ್ಲಿ ಇರುವುದಿಲ್ಲ. ದೈವ ಶ್ರದ್ಧೆಯನ್ನು ಮನುಷ್ಯ ಎಷ್ಟಾದರೂ ಬೆಳೆಸಿಕೊಳ್ಳಬಹುದು. ದೈವ ಶ್ರದ್ಧೆ ಮನುಷ್ಯ ಇಚ್ಛೆಮೇಲೆ ಆಧಾರಪಟ್ಟಿರುತ್ತದೆ. ಅದೇ ಪ್ರಪಂಚ ಶ್ರದ್ಧೆಯಾದರೆ ಮನುಷ್ಯ ಅಧೀನದಲ್ಲಿ ಇರುವುದಿಲ್ಲ. ಮನುಷ್ಯ ದೇವರ ವಿಷಯದಲ್ಲಿ ಮುಂದಕ್ಕೆ ಹೋಗಬೇಕೆಂದುಕೊಂಡರೆ ಮುಂದಕ್ಕೆ ಹೋಗಬಲ್ಲನು. ಅದಕ್ಕೆ ಬೇಕಾದ ಶ್ರದ್ಧೆಯನ್ನು ಮನುಷ್ಯ ಎಷ್ಟಾದರೂ ಬೆಳೆಸಿಕೊಳ್ಳಬಹುದು. ಅದು

ಮನುಷ್ಯನಿಗೆ ಸಾಧ್ಯವಾಗುವ ಕೆಲಸವೇ. ಏಕೆಂದರೇ! ದೇವರ ಮೇಲೆ ಶ್ರದ್ಧೆ ಮನುಷ್ಯನಿಗೆ ಸ್ವಂತ ಹಕ್ಕಾಗಿ ಇದೆ. ಆದ್ದರಿಂದ ಮನುಷ್ಯ ತಾನು ದೇವರ ಬಗ್ಗೆ ಇಲ್ಲದ ಶ್ರದ್ಧೆಯನ್ನು ಬೆಳಸಿಕೊಳ್ಳಬಹುದು. ಹಾಗೆಯೇ ಇರುವ ಶ್ರದ್ಧೆಯನ್ನು ಇಲ್ಲದಂತೆ ಮಾಡಿಕೊಳ್ಳಬಹುದು. **ಪ್ರಪಂಚ ಶ್ರದ್ಧೆ ಕರ್ಮಾಧೀನವಾದಂತೆ ಪರಮಾತ್ಮನ ಮೇಲೆ ಶ್ರದ್ಧೆ ಜೀವಾಧೀನವಾಗಿ ಇದೆ.** ಶ್ರದ್ಧೆ ಜೀವಿಯು ಅಧೀನದಲ್ಲಿರುವುದು ಆಗಿರುವುದರಿಂದ ಅದನ್ನು ಜೀವಿಯು ಹೆಚ್ಚಾಗಿ ಮಾಡಿಕೊಳ್ಳಬಹುದು ಅಥವಾ ಕಡಿಮೆಯಾಗಿ ಮಾಡಿಕೊಳ್ಳಬಹುದು. ಪೂರ್ತಿ ಇಲ್ಲದ ಶ್ರದ್ಧೆಯನ್ನು ತಂದುಕೊಳ್ಳಬಹುದು. ಪೂರ್ತಿ ಇರುವ ಶ್ರದ್ಧೆಯನ್ನು ಇಲ್ಲದಂತೆ ಸಹ ಮಾಡಿಕೊಳ್ಳಬಹುದು.

**12) ಪ್ರ :– ಪ್ರಪಂಚ ಶ್ರದ್ಧೆ ಕರ್ಮವನ್ನನುಸರಿಸಿ ಇರುತ್ತದಲ್ಲವೆ! ಹಾಗೆಯೇ ದೈವ ಶ್ರದ್ಧೆ ಕರ್ಮಕ್ಕೆ ಸಂಬಂಧ ಇಲ್ಲ ಎಂದು ಹೇಳಿದ್ದೀರಲ್ಲವೆ! ನಮ್ಮ ಅನುಮಾನದ ಪ್ರಕಾರ ದೈವ ಶ್ರದ್ಧೆ ಕಾಲವನ್ನನುಸರಿಸಿ ಇರುತ್ತದಾ? ಪೂರ್ವದಲ್ಲಿ ಒಂದು ವಿಧ ಈಗ ಒಂದು ವಿಧ ಏನಾದರೂ ಇದೆಯಾ?**

**ಉತ್ತರ :–** ಹಾಗೆ ಇರುವುದಕ್ಕೆ ಅವಕಾಶವಿಲ್ಲ. ಕರ್ಮ, ಕಾಲ ಒಂದಕ್ಕೊಂದು ಅವಿನಾಭಾವ ಸಂಬಂಧವಾಗಿ ಇವೆ. ಪ್ರಪಂಚ ವಿಷಯದಲ್ಲಿ ಕರ್ಮದ ಪ್ರಕಾರ ಕಾಲ ನಡೆಯುತ್ತಿರುತ್ತದೆ. ಅದೇ ದೈವ ವಿಷಯದಲ್ಲಿ ಕರ್ಮ ಇಲ್ಲ ಆದ್ದರಿಂದ ಕಾಲ ಕರ್ಮಾನುಸಾರ ಇರುವುದಿಲ್ಲ. ಪೂರ್ವದಲ್ಲಿ ಮನುಷ್ಯನಿಗಿರುವ ಶರೀರ ಭಾಗಗಳೇ ಈಗ ಮನುಷ್ಯನಿಗು ಕೂಡಾ ಇವೆ. ಪೂರ್ವದಲ್ಲಿ ಇಲ್ಲದಿರುವವು ಈಗ ಇರುವುದು, ಈಗ ಇಲ್ಲದಿರುವವು ಪೂರ್ವದಲ್ಲಿ ಇರುವುದು ಎನ್ನುವುದೇನೂ ಇಲ್ಲ. ಎಂದಿಗೂ ಮಾನವ ಶರೀರ ಜೀವನದ ವ್ಯವಸ್ಥೆ ಒಂದೇ ರೀತಿಯಾಗಿ ಇದೆ.

**13) ಪ್ರ :– ಪೂರ್ವದ ನಾಗರಿಕತೆಯಲ್ಲಿ ಹಿಂದುಳಿದವರು ಈದಿನ ಕಾಲ ಕಳೆದಂತೆಲ್ಲ ಪೂರ್ತಿ ನಾಗರಿಕರಾಗಿ ತಯಾರಾಗಿದ್ದಾರಲ್ಲವೆ! ಹಾಗೆಯೇ ಪೂರ್ವದಲ್ಲಿ ಆಧ್ಯಾತ್ಮಿಕದಲ್ಲಿ ಹಿಂದುಳಿದವರು ಪ್ರಸ್ತುತ ಕಾಲದಲ್ಲಿ ಮುಂದಕ್ಕೆ ಹೋಗಿ ಆಗ**

**ತಿಳಿಯದ ಆತ್ಮ ವಿಧಾನವನ್ನು ಈಗೇನಾದರೂ ತಿಳಿದಿದ್ದಾರೇನೋ! ನೀವು ಹೇಳಿದ ಮಳಯಾಳ ಸ್ವಾಮಿ, ವಿದ್ಯಾಪ್ರಕಾಶಾನಂದಗಿರಿ ಸ್ವಾಮಿ ಇಬ್ಬರೂ ಪೂರ್ವದಲ್ಲಿ ಇರುವವರೇ ಆದರೂ ಈಗ ಅವರಿಲ್ಲ. ಗತಿಸಿ ಹೋದ ಅವರು ಹಿಂದಿನ ಕಾಲದಲ್ಲಿ ಆಧ್ಯಾತ್ಮಿಕದಲ್ಲಿ ಹಿಂದುಳಿದಿರಬಹುದು. ಇಂದಿನ ಕಾಲದಲ್ಲಿ ಪ್ರಸ್ತುತವಿರುವ ಸ್ವಾಮೀಜಿಗಳು ಯಾರಾದರೂ ಸಾಧಾರಣ ಮನುಷ್ಯ ನಾಗರಿಕತೆಯಲ್ಲಿ ಮುಂದಕ್ಕೆ ಹೋದಂತೆ ಆಧ್ಯಾತ್ಮಿಕದಲ್ಲಿ ಮುಂದಕ್ಕೆ ಹೋಗಿರಬಹುದಲ್ಲವೆ! ಹಿಂದಿನ ಕಾಲದಲ್ಲಿ ಯಾರಿಗೂ ತಿಳಿಯದ ಆತ್ಮಗಳ ವಿಷಯ ನೀವು ಹೇಳಿದಂತೆ ನಿಮ್ಮ ಸಮಕಾಲೀನರಾದ ಸ್ವಾಮೀಜಿಗಳು ಯಾರಾದರೂ ನಿಮ್ಮೊಂದಿಗೆ ಆಧ್ಯಾತ್ಮಿಕದಲ್ಲಿ ಮುಂದಕ್ಕೆ ಹೋಗಿರಬಹುದಲ್ಲವೆ! ಪ್ರಸ್ತುತ ಕಾಲದಲ್ಲಿ ಯಾರಾದರೂ ಭಗವದ್ಗೀತೆಗೆ ಭಾವವನ್ನು ಬರೆದಿದ್ದರೇ ಅದರಲ್ಲಿ ನೀವು ತೋರಿಸಿದ ಎರಡು ಶ್ಲೋಕಗಳಿಗೆ ಭಾವಾರ್ಥವನ್ನು ಏನು ಬರೆದಿದ್ದಾರೋ ಸ್ವಲ್ಪ ತಿಳಿಸಿರಿ?**

**ನನ್ನ ಉತ್ತರ :–** ನೋಡುತ್ತಿದ್ದರೆ ನಾನು ಎಷ್ಟು ಚೆನ್ನಾಗಿ ವಿವರವನ್ನು ಹೇಳಿದರೇ, ನೀನು ಅಷ್ಟು ಚೆನ್ನಾಗಿ ಪ್ರಶ್ನೆ ಕೇಳುತ್ತಿದ್ದೀಯ. ದೇವರು ತನ್ನವರಿಗೆ ಎದುರಾಡದ ಜ್ಞಾನವನ್ನು ಕೊಟ್ಟಿದ್ದೇನೆ ಎಂದಿದ್ದಾನೆ. ಯಾರು ಪ್ರಶ್ನಿಸಿದರೂ ಅದಕ್ಕೆ ಉತ್ತರ ಇರುವಹಾಗೆ ಜ್ಞಾನವನ್ನು ಕೊಟ್ಟಿದ್ದಾನೆಂದು ಅದರ ಅರ್ಥ. ನೀನು ಕೇಳಿದ ಪ್ರಶ್ನೆಯಲ್ಲಿ ಹೇತು ಪದ್ಧತಿ ಇದೆ, ಆದ್ದರಿಂದ ನಾನು ಸುಲಭವಾಗಿ ಉತ್ತರ ಹೇಳಬಲ್ಲೆನು. ನಾನು ಮೊದಲೇ "ಶ್ರದ್ಧಾವಾನ್ ಲಭತೇ ಜ್ಞಾನಮ್" ಎಂದು ಹೇಳಿದ್ದೇನೆ. ಶ್ರದ್ಧೆಯನ್ನು ಅನುಸರಿಸಿಯೇ ಜ್ಞಾನವೆಂದು ಹೇಳಿದ್ದೇನೆ ಆದರೆ, ಕಾಲವನ್ನನುಸರಿಸಿ ಜ್ಞಾನವೆಂದು ನಾನು ಹೇಳಲಿಲ್ಲ. ಯಾವ ಕಾಲದಲ್ಲಾದರೂ ಮನುಷ್ಯನಿಗಿರುವ ಶ್ರದ್ಧೆಯನ್ನನುಸರಿಸಿ ಜ್ಞಾನ ಲಭಿಸುತ್ತದೆ.

ನಾಗರಿಕತೆ ವಿಷಯಕ್ಕೆ ಬಂದರೆ ಅದು ಮನುಷ್ಯರ ಕರ್ಮವನ್ನನುಸರಿಸಿ ಇರುತ್ತದೆ. ಕಾಲಕಳೆದಂತೆಲ್ಲಾ ನಾಗರಿಕತೆ ಬೆಳೆದಿರಬಹುದು, ಆದರೆ ನಾಗರಿಕತೆ ಬೆಳೆಯುತ್ತಿದ್ದಂತೆಲ್ಲ ಮನುಷ್ಯರಲ್ಲಿ ಜ್ಞಾನ ಬೆಳೆದಿಲ್ಲ ಆದರೆ, ಇರುವ ಜ್ಞಾನ ಸ್ವಲ್ಪ ಕಡಿಮೆಯಾಗಿದೆ. ನಾಗರಿಕತೆಯೊಂದಿಗೆ ಮನುಷ್ಯನಿಗೆ ಸುಖಗಳೂ ಸಹ ಬೆಳೆದಿವೆ. ಆಗ ನಡೆಯುವವನು ಈಗ ವಾಹನದಲ್ಲಿ ವೇಗವಾಗಿ ಹೋಗುತ್ತಿದ್ದಾನೆ.

ಹೀಗೆ ಎಲ್ಲ ರಂಗಗಳಲ್ಲಿ ಸುಖಗಳು ಬೆಳೆದಿವೆ. ಅದರಿಂದ ಮನುಷ್ಯನ ಧ್ಯಾಸ ಸುಖಗಳ ಕಡೆ ಹೋಗಿ ಜ್ಞಾನದ ಕಡೆ ಇಲ್ಲದಂತೆ ಹೋಗಿದೆ. ಪೂರ್ವವಿದ್ದ ಭಕ್ತಿ, ವಿಶ್ವಾಸಗಳು ಇಂದಿನ ಕಾಲದಲ್ಲಿ ಮನುಷ್ಯನಲ್ಲಿ ಇಲ್ಲ ಎಂದು ಹೇಳಬಹುದು. ಜ್ಞಾನ ಮನುಷ್ಯನ ಶ್ರದ್ಧೆಯನ್ನನುಸರಿಸಿ ಇರುತ್ತದೆ. ಭಕ್ತಿ ವಿಶ್ವಾಸಗಳು ಬೇರೆ, ಶ್ರದ್ಧೆ ಬೇರೆಯಾಗಿ ಇದೆ. ಕಾಲಕಳೆದಂತೆಲ್ಲ ಭಕ್ತಿ ವಿಶ್ವಾಸಗಳು ಬೆಳೆದಿರಬಹುದು. ಆದರೇ ಜ್ಞಾನದ ಮೇಲೆ ಶ್ರದ್ಧೆ ಕಡಿಮೆಯಾಗಿದೆಯೆಂದೇ ಹೇಳಬಹುದು. ಮನುಷ್ಯರಲ್ಲಿ ಆ ಬದಲಾವಣೆ ಚೆನ್ನಾಗಿ ಕಾಣಿಸುತ್ತಿದೆ. ಜ್ಞಾನ ವಿಷಯದಲ್ಲಿ ಬೋಧಕರಾಗಿ, ಗುರುಗಳಾಗಿ ಚಲಾವಣೆಯಾಗುವವರು ಪೂರ್ವದಲ್ಲಿರುವ ಜ್ಞಾನವನ್ನೇ ಹೊಂದಿ, ಅದನ್ನೇ ಪ್ರಜೆಗಳಿಗೆ ಬೋಧಿಸುತ್ತಿದ್ದಾರೆ. ಕಾಲಕಳೆದಂತೆಲ್ಲ, ನಾಗರಿಕತೆ ಬೆಳೆದಂತೆಲ್ಲ ಜ್ಞಾನದಲ್ಲಿ ಎಂತಹ ಬದಲಾವಣೆ ಬರಲಿಲ್ಲ. ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳಿಗೆ ಗತಿಸಿಹೋದ ಸ್ವಾಮೀಜಿಗಳ ಭಾವನೆಗಳನ್ನು ಹೇಳಿದ್ದೇವೆ. ಹಾಗಲ್ಲದೆ ಈ ದಿನ ಜೀವಿಸಿರುವ ಸ್ವಾಮೀಜಿಗಳು ಆ ಶ್ಲೋಕಗಳಿಗೆ ಬರೆದ ಭಾವವನ್ನು ತಿಳಿಸಿರೆಂದು ಕೇಳಿದ್ದಾರೆ. ಆದ್ದರಿಂದ ಪ್ರಸ್ತುತ ಕಾಲದಲ್ಲಿ ಒಳ್ಳೆಯ ಹೆಸರು ಪ್ರಖ್ಯಾತಿಗಳು ಗಳಿಸಿದ ಸ್ವಾಮೀಜಿಯವರು ಬರೆದ ಜ್ಞಾನವನ್ನು ಕೆಳಗೆ ತಿಳಿಸುತ್ತಿದ್ದೇವೆ ನೋಡಿರಿ.

ಸ್ವಾಮಿ ಸುಂದರ ಚೈತನ್ಯಾನಂದರವರ ಹೆಸರು ಆಂಧ್ರ ಪ್ರಜೆಗಳಿಗೆ ಸುಪರಿಚಯವೇ. ಸ್ವಾಮಿಯವರು ಪ್ರತಿನಿತ್ಯ ಬೆಳಗ್ಗೆ ಟಿ.ವಿ ಪ್ರಸಾರಗಳಲ್ಲಿ ಕಾಣಿಸುತ್ತಾ ತನ್ನ ಬೋಧನೆಗಳನ್ನು ಕೇಳಿಸುತ್ತಿದ್ದಾನೆ. ಪ್ರಸ್ತುತವಿರುವ ಸ್ವಾಮೀಜಿಗಳಲ್ಲಿ ತನ್ನ ಕೆಲಸ ತಾನು ಮಾಡಿಕೊಳ್ಳುತ್ತಾ, ತನ್ನ ಜ್ಞಾನವನ್ನು ತಾನು ಬೋಧಿಸುತ್ತಾ, ಪ್ರಶಾಂತವಾಗಿ ಕಾಲಕಳೆಯುತ್ತಿರುವ ಹೆಸರುಪಡೆದ ಸ್ವಾಮಿ ಸುಂದರ ಚೈತನ್ಯರವರು. ಸುಂದರ ಚೈತನ್ಯ ಸ್ವಾಮೀಜಿ ಪೂರ್ತಿ ಕೃಷ್ಣ ಭಕ್ತನು, ಆದ್ದರಿಂದ ಆತನೆಂದರೇ ಅಷ್ಟೋ ಇಷ್ಟೋ ನನಗೂ ಅಭಿಮಾನವೇ. ಈ ಮಧ್ಯಕಾಲದಲ್ಲಿ ಅಂದರೆ 2010ನೇ ವರ್ಷ ಸ್ವಾಮಿಯವರು ತಾವು ಬರೆದ “ಚೈತನ್ಯ ಭಗವದ್ಗೀತೆ” ಯನ್ನು ಬಿಡುಗಡೆ ಮಾಡುವುದು ನಡೆದಿದೆ. ಆತನು ಬರೆದ ಭಗವದ್ಗೀತೆ ನಾಲ್ಕು ಭಾಗಗಳಾಗಿದ್ದು ‘ಗೀತಾ ಮಕರಂದ’ ಗ್ರಂಥಕ್ಕಿಂತ ಸೈಜಿನಲ್ಲಿ ದೊಡ್ಡದಾಗಿ

ಇದೆ. ಸುಮಾರು ಎರಡು ಸಾವಿರ ಪುಟಗಳ ಗ್ರಂಥವಾಗಿ ಇದೆ. ಅಷ್ಟು ದೊಡ್ಡ ಗ್ರಂಥದಲ್ಲಿಯೂ ಸಹ ಕಾಲ ಬದಲಾದರೂ, ಮನುಷ್ಯರಲ್ಲಿ ಜ್ಞಾನ ಬದಲಾಗುವುದಿಲ್ಲವೆಂದು ನಿರೂಪಿಸುವಂತೆ ಎರಡು ಶ್ಲೋಕಗಳ ವಿವರ ಇದೆ. ನೀವು ಕೇಳಿದಂತೆ ಪ್ರಸ್ತುತ ಕಾಲದಲ್ಲಿ ಜೀವಿಸಿರುವ, ಒಳ್ಳೆಯ ಹೆಸರು ಇರುವ ಸ್ವಾಮೀಜಿ ಬರೆದ ಭಾವವನ್ನು ಕೆಳಗೆ ತೋರಿಸುತ್ತಿದ್ದೇವೆ ನೋಡಿರಿ.

(16ನೆ ಶ್ಲೋಕಕ್ಕೆ ಬರೆದ ವಿವರವೆಲ್ಲವೂ ಕೆಳಗೆ ಇದೆ.)

(ಲೋಕದಲ್ಲಿ ಪುರುಷರು ಇಬ್ಬರೇ ಇದ್ದಾರೆ. ಒಬ್ಬನು ಕ್ಷರ ಪುರುಷನು, ಮತ್ತೊಬ್ಬ ಅಕ್ಷರ ಪುರುಷನು. ಸರ್ವ ಭೂತಗಳು ಕ್ಷರಗಳು. ಕೂಟಸ್ಥನು ಅಕ್ಷರ ಸ್ವರೂಪನು)

## ವ್ಯಾಖ್ಯ

ಲೋಕದಲ್ಲಿ, ಅಂದರೇ ಸಂಸಾರದಲ್ಲಿ ಸೋಪಾಧಿಕ ಚೈತನ್ಯವು ಇಬ್ಬರು ಪುರುಷರಾಗಿ ಹೇಳಲ್ಪಡುತ್ತಿದೆ. ಒಬ್ಬನು ಕ್ಷರ ಪುರುಷನು, ಮತ್ತೊಬ್ಬನು ಅಕ್ಷರಪುರುಷನು. ಕಾರ್ಯೋಪಾದಿ ಇರುವವನು ಕ್ಷರ ಪುರುಷನು ಕಾರಣೋಪಾದಿ ಇರುವವನು ಅಕ್ಷರ ಪುರುಷನು.

ಕ್ಷರ ಎಂದರೆ ನಶಿಸುವುದು ಆದ್ದರಿಂದ ನಶಿಸುವ ಕಾರ್ಯೋಪಾದಿ ಇರುವವನು ಕ್ಷರ ಪುರುಷನು. ಅಕ್ಷರ ಪುರುಷನು ಎಂದರೆ ಅದಕ್ಕೆ ಭಿನ್ನವಾದವನು, ಕಾರಣೋಪಾದಿ ಇರುವವನು. ಕಾಲ ಪ್ರವಾಹದಲ್ಲಿ ನಶಿಸದ ಉಪಾಧಿ ಕಾರಣೋಪಾಧಿ. ಅದೇ ಭಗವಂತನನ್ನು ಆಶ್ರಯಿಸಿಕೊಂಡಿರುವ ಮಾಯಾ ಶಕ್ತಿ, ತ್ರಿಗುಣ ಮಿಳಿತವಾಗಿದೆ.

ಕ್ಷರೋಪಾಧಿ ಇರುವ ಕಾರ್ಯ ಪುರುಷನಿಗೆ ಉತ್ಪತ್ತಿ ಸ್ಥಾನ ಆಗುವುದರಿಂದ, ಅಕ್ಷರೋಪಾದಿ ಇರುವ ಕಾರಣ ಪುರುಷನು ಅಥವಾ ಮಾಯಾಶಕ್ತಿ ಸಂಸಾರಕ್ಕೆ ಬೀಜ ಭೂತವಾಗಿದೆ. ಕ್ಷರೋಪಾದಿ ಇರುವ ಉತ್ಪತ್ತಿ ಬೀಜ, ಸಂಸಾರಿಗಳಾದ ಪ್ರಾಣಿಗಳ ಕಾಮ ಕರ್ಮಾದಿ ಸಂಸ್ಕಾರಗಳಿಗೆ ಅಕ್ಷಯ ಪುರುಷನೇ ಆಶ್ರಯ ಸ್ಥಾನ.

# ಕ್ಷರ ಪುರುಷನು

ಕ್ಷರ ಎಂದರೆ ನಶಿಸುವುದು ಒಂದು ಕಾಲದಲ್ಲಿ ಕಾಣಿಸಿ ಮತ್ತೊಂದು ಕಾಲದಲ್ಲಿ ಕಣ್ಮರೆಯಾಗುವುದು. ವಿಕಾರಯುತವಾದುದು. ಆದ್ದರಿಂದ ಸಕಲ ಭೂತಗಳು ಸರ್ವಕಾರ್ಯಗಳು, ಇವೆಲ್ಲಾ ನಡೆಯುವುದಕ್ಕೆ ಆಶ್ರಯವಾದ ದೃಶ್ಯಮಾನ ಜಗತ್ತು ಎಲ್ಲಾ ಕ್ಷರವೇ ಆದ್ದರಿಂದ ಅದು ಕ್ಷರ ಪುರುಷನು. ಕಾರ್ಯೋಪಾದಿ ಇರುವವನು ಎಂದರೇ ಕಾರ್ಯರೂಪ ಪ್ರಪಂಚವಾಗಿ ಗೋಚರಿಸುವವನು ಆದ್ಯಂತಗಳು ಹೊಂದಿ ಕಾರ್ಯರೂಪದಲ್ಲಿ ಗೋಚರಿಸುತ್ತಾ ವಿಕಾರವನ್ನು ಹೊಂದುತ್ತಾ, ವಿನಾಶನವಾಗುವ ಸರ್ವ ಭೂತ ಶರೀರಗಳು ಕ್ಷರ ಪುರುಷನ ಕೆಳಗೇ ಬರುತ್ತವೆ.

# ಅಕ್ಷರ ಪುರುಷನು

ಅನೇಕ ನಾಮ ರೂಪಗಳೊಂದಿಗೆ ಅನೇಕ ವಿಧಗಳಾಗಿ ಯಾವುದಾದರೇ ಕಾರ್ಯರೂಪವಾಗಿ ಗೋಚರಿಸುತ್ತಿದೆಯೋ ಅಂತಹ ವ್ಯಕ್ತ ರೂಪ ಪ್ರಪಂಚ ಕ್ಷರ. ವ್ಯಕ್ತವಾಗುವ ಈ ಕಾರ್ಯರೂಪ ಜಗತ್ತಿಗೆ ಕಾರಣವಾಗಿ, ಯಾವುದಾದರೇ ಅವ್ಯಕ್ತವಾಗಿ ಇದೆಯೋ, ಅಂದರೆ ವ್ಯಕ್ತವಾಗದಂತೆ ಇದೆಯೋ ಅದುವೇ ಅಕ್ಷರ. ಅವ್ಯಕ್ತವಾಗಿದ್ದು ಜಗತ್ ಕಾರ್ಯಕ್ಕೆ ಕಾರಣವಾದ ಮಾಯಾ ಶಕ್ತಿಯೇ ಅಕ್ಷರ. ಬದಲಾವಣೆ ಇಲ್ಲದ್ದು ಕೂಟಸ್ಥ.

ಕೂಟಸ್ಥ ಎನ್ನುವ ಪದವನ್ನು ಇಲ್ಲಿ ಜಾಗ್ರತೆಯಾಗಿ ಅರ್ಥಮಾಡಿ ಕೊಳ್ಳಬೇಕು. ಅಕ್ಷರಪುರುಷನು, ಕೂಟಸ್ಥನೆಂದು ಹೇಳಲ್ಪಟ್ಟಿದ್ದಾನೆ. ಪರಬ್ರಹ್ಮವನ್ನು ಕೂಟಸ್ಥವೆಂದು, ಅಕ್ಷರವೆಂದು ಇದಕ್ಕೂ ಮುನ್ನ ನಾವು ಹೇಳಿಕೊಂಡಿದ್ದೇವೆ. ಇಲ್ಲಿ ಮತ್ತೆ ಮಾಯೆಯನ್ನು ಕೂಟಸ್ಥ, ಅಕ್ಷರ ಎಂದು ಹೇಳಿಕೊಳ್ಳುತ್ತಿದ್ದೇವೆ. ಈ ವ್ಯತ್ಯಾಸವನ್ನು ಸ್ಪಷ್ಟವಾಗಿ ಗ್ರಹಿಸಬೇಕು.

ಪರಬ್ರಹ್ಮವು ಸರ್ವಾಧಾರವಾಗಿ, ಸರ್ವ ವಿಕಾರಗಳಿಗೂ ಆಶ್ರಯವಾಗಿ ತಾನು ಸ್ವರೂಪತಃ ಅವು ಕಾರ್ಯವಾಗಿರುವುದರಿಂದ ಕೂಟಸ್ಥವೆಂದು ಹೇಳಲ್ಪಟ್ಟಿದ್ದಾನೆ. ಬಚ್ಚಿಟ್ಟುಕೊಂಡಿರುವ ಹಾಗೆ ಕೂಟಸ್ಥನೆಂದು ಸಹ ಹೇಳಿಕೊಂಡಿದ್ದೇವೆ. ಆದರೆ ಪ್ರಸ್ತುತ ಅಕ್ಷರ, ಕೂಟಸ್ಥ ಎನ್ನುವ ಪದಗಳಿಗೆ ಬ್ರಹ್ಮವು ಎನ್ನುವ ಅರ್ಥವನ್ನು ಗ್ರಹಿಸುವುದಕ್ಕೆ ಅವಕಾಶವಿಲ್ಲ.

ಕಾರ್ಯವಾದ ಜಗದ್ರೂಪದಲ್ಲಿ ಗೋಚರಿಸುವ ಕ್ಷರ ಪುರುಷನು ಕಾಲ ಪ್ರವಾಹದಲ್ಲಿ ಕರಗಿ ಹೋಗುತ್ತಾನೆ. ವ್ಯಕ್ತವಾಗುವ ಕಾರ್ಯರೂಪ ಕ್ಷರ ಪುರುಷನಿಗೆ ಕಾರಣವಾಗಿ ಅವ್ಯಕ್ತವಾಗಿರುವ ಮಾಯೆ ಇಲ್ಲಿ ಅಕ್ಷರವಾಗಿ, ಕೂಟಸ್ಥವಾಗಿ ಹೇಳಲ್ಪಟ್ಟಿದೆ.

ಅಕ್ಷರ ಎಂದರೆ ಪರಬ್ರಹ್ಮದಂತೆ ಅವಿನಾಶಿ ಎಂದು ಅರ್ಥವಲ್ಲ. ಕ್ಷರನಹಾಗೆ ಕಾಲದಲ್ಲಿ ನಶಿಸದಂತೆ ಅವ್ಯಕ್ತವಾಗಿದ್ದು ಪುನಃ ಸೃಷ್ಠಿಗೆ ಕಾರಣವಾಗುತ್ತದೆ ಎಂದು ಅರ್ಥ. ಪ್ರಳಯ ಕಾಲದಲ್ಲಿ ಕ್ಷರ ಪುರುಷನು ನಶಿಸಿದರೂ ಅವ್ಯಕ್ತವಾದ ಮಾಯೆ ನಶಿಸದಂತೆ ಇದ್ದು ಪುನಃ ಜಗತ್ ಕಾರ್ಯಕ್ಕೆ ಕಾರಣವಾಗುವುದರಿಂದ ಅದು ಸಾಪೇಕ್ಷಿಕವಾಗಿ ಅಕ್ಷರವೇ ಹೊರತು, ಪಾರಮಾರ್ಥಿಕವಾಗಿ ಅಕ್ಷರವಾದ ಬ್ರಹ್ಮವಲ್ಲ. ಜ್ಞಾನೋದಯದಲ್ಲಿ ನಶಿಸುವ ಮಾಯೆ ಜ್ಞಾನ ಸ್ವರೂಪವಾದ ಪರಬ್ರಹ್ಮದಂತೆ ಅಕ್ಷರ ಹೇಗೆ ಆಗುತ್ತದೆ?

ಅಕ್ಷರ ಹೇಗೋ ಕೂಟಸ್ಥವೂ ಅಷ್ಟೇ. ಕೂಟವೆಂದರೆ ಮಾಯೆ ಎಂದು, ಮೋಸವೆಂದು, ವಕ್ರವೆಂದು ಕುಟಿಲತ್ವವೆಂದು ಕೂಡಾ ಅರ್ಥಗಳಿವೆ, ಮಾಯೆಯಲ್ಲಿ ಇವೆಲ್ಲಾ ಇರುತ್ತವೆ. ಆದ್ದರಿಂದ **ಅಕ್ಷರ, ಕೂಟಸ್ಥವೆನ್ನುವ ಶಬ್ದಗಳು ಪರಬ್ರಹ್ಮವನ್ನು ಸೂಚಿಸುವವೇ ಆದರೂ ಇಲ್ಲಿ ಅವುಗಳನ್ನು ಮಾಯೆಗೆ ಅನ್ವಯಿಸಿಕೊಳ್ಳಬೇಕು.**

ಉಪಾಧಿಗಳು ಕ್ಷರವಾದರೂ ಅಕ್ಷರವಾದರೂ ಅವು ಪರಬ್ರಹ್ಮಕ್ಕೆ ಅನ್ಯವಾಗಿ ಇರಲಾರವು. ಕ್ಷರಾಕ್ಷರಗಳು ಎರಡೂ ಪರಮಾತ್ಮನಿಗೆ ಉಪಾಧಿಗಳೆ ಆದ್ದರಿಂದ ಉಪಾಧಿಗಳನ್ನು ತೊಲಗಿಸಿದರೆ ಕೇವಲ ಶುದ್ಧ ಚೈತನ್ಯವೇ ಅದ್ವಯವಾಗಿ ಶೋಭಿಸುತ್ತದೆ. "ತದ್ಧಾಮ ಪರಮಂ ಮಮ" ಎಂದು ಆರನೆ ಶ್ಲೋಕದಲ್ಲಿ ಭಗವಂತನು ತಿಳಿಸಿರುವುದು ಇದನ್ನೇ. ಇದು ಅಲ್ಲ, ಇದು ಅಲ್ಲ ಎಂದು ಎಲ್ಲವನ್ನು ನಿಷೇಧಿಸುತ್ತಾ, ಅದಕ್ಕಿಂತ ಪರವಾದುದು ಇಲ್ಲ ಎಂದು ಉಪನಿಷತ್ತು ಯಾವುದನ್ನಾದರೆ ಪ್ರತಿಪಾದಿಸಿದೆಯೋ ಅದೇ ಕ್ಷರಾಕ್ಷರಗಳಿಗೆ ವಿಲಕ್ಷಣವಾದ ಪರಮಾರ್ತ ತತ್ತ್ವವು.

ಮೇಲೆ ಬರೆದಿರುವುದೆಲ್ಲಾ ಸುಂದರ ಚೈತನ್ಯಸ್ವಾಮಿಯವರು ಬರೆದಿರುವುದೇ. ನಿಮಗೆ ಏನು ಅರ್ಥವಾಗಿದೆಯೋ ಏನೋ ಆದರೆ ನಮಗೆ ಮಾತ್ರ ಪರ ಭಾಷೆಯವರ ಮಧ್ಯದಲ್ಲಿ ಸಿಲುಕಿಕೊಂಡು ಅವರ ಭಾಷೆಯನ್ನು

ಕಷ್ಟವಾಗಿ ಅರ್ಥಮಾಡಿಕೊಂಡಂತಿದೆ. 16ನೇ ಶ್ಲೋಕಕ್ಕೆ ಆತನು ಬರೆದಿರುವುದೆಲ್ಲಾ ಇಲ್ಲಿ ಹೊಂದಿಸಿದ್ದೇವೆ. ಸ್ವಾಮಿಯವರು ಬರೆದ ಬರಹದಲ್ಲಿ ಸರ್ವ ಜೀವಿಗಳ ಶರೀರಗಳೇ ಕ್ಷರ ಪುರುಷನೆಂದು ಹೇಳುವುದಾಗಿದೆ. ನಂತರ ಅಕ್ಷರ ಪುರುಷನನ್ನು ವಿವರಿಸಿ ಹೇಳುತ್ತಾ ಗುಣರೂಪವಾದ ಮಾಯೆಯಾಗಿ ಅಕ್ಷರನನ್ನು ಹೇಳುವುದಾಗಿದೆ.

ಮಳಯಾಳ ಸ್ವಾಮಿಯವರು ಆತನ ಶಿಷ್ಯನಾದ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಯವರು ಕ್ಷರ ಪುರುಷನನ್ನು ಶರೀರಗಳೆಂದು ವರ್ಣಿಸಿ ಹೇಳಿದರೂ, ಅಕ್ಷರ ಪುರುಷನನ್ನು ಮಾತ್ರ ಜೀವಾತ್ಮವಾಗಿ ಹೇಳಿದ್ದಾರೆ. ಅದಾದರೂ ಒಂದು ವಿಧವಾಗಿ ಎರಡನೆಯವನನ್ನಾದರೂ ಯಾವುದೋ ಒಂದು ಪುರುಷನಾಗಿ ಹೇಳಿದ್ದಾರೆ. ಇಲ್ಲಿ ಸುಂದರಚೈತನ್ಯ ಸ್ವಾಮಿಯವರು ಹೇಳಿದ್ದು ಇದಕ್ಕೆ ಪೂರ್ತಿ ಭಿನ್ನವಾಗಿ ಇದೆ. ಎರಡನೆಯವನನ್ನು ಸಹ ಯಾವುದೋ ಒಂದು ಪುರುಷನಾಗಿ ಹೇಳದೇ, ಪ್ರಕೃತಿ ಜನಿತವಾದ ಮಾಯೆಯನ್ನು ಎರಡನೆ ಸ್ಥಾನದಲ್ಲಿ ಇಡುವುದರಿಂದ ಅಲ್ಲಿಯೂ ಸಹ ಸ್ತ್ರೀ ಸ್ವರೂಪವನ್ನು ಇಟ್ಟಂತಾಗಿದೆ. ಹಿಂದಿನ ಕಾಲದಲ್ಲಿ 50 ವರ್ಷಗಳ ಕೆಳಗೆ ಬರೆಯಲಾಗಿರುವ ಮಳಯಾಳ ಸ್ವಾಮಿಯವರ ಗ್ರಂಥದಲ್ಲಿ ಮುವ್ವರು ಪುರುಷರ ಸ್ಥಾನದಲ್ಲಿ ಇಬ್ಬರು ಪುರುಷರು ನಿಂತುಹೋದಾಗ ಒಂದನೆ ಸ್ಥಾನದಲ್ಲಿ ಸ್ತ್ರೀ ಸ್ವರೂಪವನ್ನು ಹೇಳಿ ಕೊನೆಗೆ ಆ ಶ್ಲೋಕವನ್ನು ಅಧರ್ಮ ಭಾವನೆಯಾಗಿ ಬದಲಾಯಿಸಿದ್ದಾರೆ. ಇಂದಿನ ಕಾಲದಲ್ಲಿ ನಾಗರಿಕತೆ ಬೆಳೆದು ಜ್ಞಾನ ಅಭಿವೃದ್ಧಿ ಆಗಿದೆಯೆನ್ನುವ ನಿಮ್ಮ ಮಾತು ಅಸತ್ಯವಾಗಿ ಕಾಣಿಸುತ್ತಿದೆ. ಪ್ರಸ್ತುತ ಕಾಲದಲ್ಲಿ ಇನ್ನೂ ಹೆಚ್ಚಾಗಿ ಅಧರ್ಮ ಬೆಳೆದಿದೆ ಎನ್ನುವುದಕ್ಕೆ ಸಾಕ್ಷ್ಯವಾಗಿ ಸುಂದರ ಚೈತನ್ಯ ಸ್ವಾಮಿಯವರು ಬರೆದ 16ನೇ ಶ್ಲೋಕವೊಂದರ ಭಾವವು ಇನ್ನೂ ಸ್ವಲ್ಪ ಕೆಟ್ಟುಹೋಗಿದೆ. ಮುವ್ವರು ಪುರುಷರ ಸ್ಥಾನದಲ್ಲಿ ಇಬ್ಬರು ಸ್ತ್ರೀಯರನ್ನು ನಿಲ್ಲಿಸುವುದು ನಡೆದಿದೆ. ಆದ್ದರಿಂದ ಗತಕಾಲದಲ್ಲಿ ಹೇಳಿದ ಜ್ಞಾನಕ್ಕಿಂತ ಈಗಲೇ ಇನ್ನೂ ಅಜ್ಞಾನವಾಗಿ, ಅಧರ್ಮವಾಗಿ ಜ್ಞಾನ ತಯಾರಾಗಿದೆಯೆಂದು ಅರ್ಥವಾಗುತ್ತಿದೆ.

ಆ ಶ್ಲೋಕದಲ್ಲಿ ಹೇಳಿರುವುದು ಮುವ್ವರು ಪುರುಷರನ್ನು ಕುರಿತು ಎಂದು ಹೇಗೆ ನೋಡಿದರೂ ಅರ್ಥವಾಗುತ್ತಿದೆ. ಹಾಗಿರುವಾಗ ಸಂಸ್ಕೃತ ಭಾಷೆಯನ್ನು ಚೆನ್ನಾಗಿ ತಿಳಿದ ಮಳಯಾಳ ಸ್ವಾಮಿ ಮತ್ತು ಆತನ ಶಿಷ್ಯನು ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಯವರು ನಾಶವಾಗುವವನು ಜೀವಿಯು ಎಂದು ಹೇಳದೆ, ಜೀವಿಯನ್ನು ನಾಶವಾಗದ ಆತ್ಮವಾಗಿ ಅಕ್ಷರನಾಗಿ ವರ್ಣಿಸಿ ಹೇಳಿ, ಮೂರನೆ ಪುರುಷನಾಗಿ ಪರಮಾತ್ಮ ಆದ ದೇವರನ್ನು ಹೇಳಿ, ಕೊನೆಗೆ ಯಾವ ಪುರುಷನು ಸಿಗದೆ ಮೊದಲ ಕ್ಷರ ಪುರುಷನ ಸ್ಥಾನದಲ್ಲಿ ಪ್ರಕೃತಿ ಸಂಬಂಧ ದೇಹವನ್ನು ಹೇಳಿದ್ದಾರೆ. ಹದಿನಾಲ್ಕನೇ ಅಧ್ಯಾಯದಲ್ಲಿ ಪ್ರಕೃತಿ ಬೇರೆ, ಪುರುಷನು ಬೇರೆಯೆಂದು, ಪ್ರಕೃತಿ ಸ್ತ್ರೀಯೆಂದು, ದೇವರಾದ ಪರಮಾತ್ಮ ಪುರುಷನೆಂದೂ ಹೇಳಿದ ಮಾತನ್ನು ಮರೆತುಹೋಗಿ, ಮೊದಲ ಪುರುಷನ ಸ್ಥಾನದಲ್ಲಿ ಪ್ರಕೃತಿಯನ್ನು ಇಟ್ಟು ಕ್ಷರನು ಶರೀರವೆಂದು ಹೇಳುವುದರಿಂದ, ಶ್ಲೋಕದಲ್ಲಿ ದೇವರು ಹೇಳಿದ ಮುವ್ವರು ಪುರುಷರಲ್ಲಿ ಒಬ್ಬ ಪುರುಷನು ಮಾಯಾವಾಗಿ ಹೋದಂತಾಗಿದೆ. ಅಲ್ಲಿ ಕೊನೆಗೆ ಇಬ್ಬರು ಪುರುಷರೇ ಉಳಿದುಹೋಗಿದ್ದಾರೆ. ಅದು ಹಾಗಿರುವಾಗ ಪ್ರಸ್ತುತ ಕಾಲದಲ್ಲಿ ದೊಡ್ಡ ಸ್ವಾಮಿಯಾಗಿ ಹೆಸರು ಗಳಿಸಿದ ಸುಂದರ ಚೈತನ್ಯ ಸ್ವಾಮಿಯವರು ಬರೆದ "ಚೈತನ್ಯ ಭಗವದ್ಗೀತೆ" ಯಲ್ಲಿ 16ನೇ ಶ್ಲೋಕಕ್ಕೆ ಬರೆದ ವಿವರವೆಲ್ಲವನ್ನೂ ನೋಡಿದರೇ, ದೇವರು ಹೇಳಿದ ಮುವ್ವರು ಪುರುಷರಲ್ಲಿ ಇಬ್ಬರು ಪುರುಷರು ಮಾಯವಾಗಿ ಕಾಣಿಸದಂತೆ ಹೋಗಿ ಅವರ ಸ್ಥಾನದಲ್ಲಿ **ಕಾಣಿಸುವ ಪ್ರಕೃತಿ** ಆದ ಶರೀರ ಒಂದು ಕಡೆ, **ಕಾಣಿಸದ ಪ್ರಕೃತಿ** ಅದ ಮಾಯೆ ಎರಡನೆ ಕಡೆ ಪುರುಷ ಸ್ಥಾನವನ್ನು ಆಕ್ರಮಿಸಿಕೊಳ್ಳುವುದರಿಂದ ಕೊನೆಗೆ ಮೂರನೆ ಪುರುಷನಾಗಿ ದೇವರೊಬ್ಬನೇ ಉಳಿದಹೋಗಿದ್ದಾನೆ. ಇಲ್ಲಿಯೂ ಸಹ ದೇವರ ಮೂರು ಆತ್ಮಗಳ ವಿಷಯದಲ್ಲಿ ಧರ್ಮ ಹೋಗಿ ಅಧರ್ಮ ಬಂದು ಸೇರಿದೆ. ಧರ್ಮ ಅಧರ್ಮವಾಗಿ ಬದಲಾಗುವುದು ಮನುಷ್ಯನ ಗ್ರಾಹಿತ ಶಕ್ತಿಯನ್ನನುಸರಿಸಿ ಇರುತ್ತದೆ. ದೇವರು ಹೇಳಿರುವುದನ್ನು ಹೇಳಿದಂತೆ ಮನುಷ್ಯ ಗ್ರಹಿಸಿಕೊಂಡರೆ ಧರ್ಮ ಧರ್ಮವಾಗಿಯೇ ಇರುತ್ತದೆ. ದೇವರು ಹೇಳಿರುವುದನ್ನು ಮನುಷ್ಯ ತಪ್ಪಾಗಿ ಗ್ರಹಿಸಿಕೊಂಡರೇ ಧರ್ಮ ಅಧರ್ಮವಾಗಿ ಬದಲಾಗಿ ಹೋಗುತ್ತದೆ.

ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ ಇರುವ 16, 17 ಶ್ಲೋಕಗಳಿಗೆ ವಿವರ ಬರೆದ ರಚನಕಾರರೆಲ್ಲರೂ ತಾವು ಅರ್ಥ ಮಾಡಿಕೊಂಡಿರುವ ತಪ್ಪು ಭಾವನೆಯನ್ನು ಬರೆದಿದ್ದಾರೆ. ಅದರೊಂದಿಗೆ ಅವುಗಳನ್ನು ಓದಿದವರೆಲ್ಲರೂ ಅಧರ್ಮವನ್ನೇ ತಿಳಿದುಕೊಳ್ಳುತ್ತಾರೆ ಹೊರತು, ಧರ್ಮವನ್ನು ತಿಳಿದುಕೊಳ್ಳುವುದಿಲ್ಲ ಅಲ್ಲವೆ! ಹೀಗೆ ಲೋಕದಲ್ಲಿ ಧರ್ಮಗಳ ಸ್ಥಾನದಲ್ಲಿ ಕಾಲಕ್ರಮೇಣ ಅಧರ್ಮಗಳು ಬಂದು ಸೇರಿಹೋಗುತ್ತಿವೆ. ಅವುಗಳನ್ನು ಸರಿಪಡಿಸುವುದಕ್ಕೆ ದೇವರೇ ಬಂದು ಧರ್ಮಗ್ಲಾನಿಯನ್ನು ನಿವಾರಿಸಿ ಪುನಃ ತನ್ನ ಧರ್ಮಗಳು ಇವೇಯೆಂದು ಹೇಳಬೇಕಾಗಿ ಬರುತ್ತದೆ. ಆದ್ದರಿಂದ ದೇವರು **"ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ"** ಎಂದಿದ್ದಾನೆ. ಆ ಮಾತಿನ ಪ್ರಕಾರ ದೇವರು ಅವತರಿಸಿ ಪುನಃ ತನ್ನ ಧರ್ಮಗಳನ್ನು ತಾನೇ ಹೇಳಿ ಹೋಗಬೇಕಾಗಿದೆ. ಧರ್ಮ ಸಂಸ್ಥಾಪನೆ ನಿಮಿತ್ತ ಬೇರೆ ಯಾರೂ ಬರುವುದಕ್ಕೆ ಅವಕಾಶವಿಲ್ಲ. ದೇವರ ಧರ್ಮಗಳು ದೇವರಿಗೇ ತಿಳಿದಿವೆ ಆದ್ದರಿಂದ, ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿದಿಲ್ಲವಾದ್ದರಿಂದ ದೇವರ ಜ್ಞಾನವನ್ನು ದೇವರೇ ಹೇಳಬೇಕಾಗಿದೆ.

**14) ಪ್ರ :– ದೇವರ ಗ್ರಂಥಗಳು ಮೂರು ಎಂದು ಹೇಳಿದ್ದೀರಲ್ಲವೆ! ಮೂರು ದೈವ ಗ್ರಂಥಗಳಲ್ಲಿ ದೇವರ ಧರ್ಮಗಳಿರುತ್ತವಲ್ಲವೆ! ಒಂದು ಗ್ರಂಥದಲ್ಲಿ ಒಂದು ಮತದಲ್ಲಿ ಧರ್ಮಗಳು ಅಧರ್ಮಗಳಾಗಿ ಬದಲಾದರೂ, ಉಳಿದ ಎರಡು ಗ್ರಂಥಗಳನ್ನು ಅನುಸರಿಸುವವರಲ್ಲಿ ಧರ್ಮಗಳು ಉಳಿದಿರುತ್ತವಲ್ಲವೆ! ಭೂಮಿ ಮೇಲೆ ಧರ್ಮಗಳಿಗೆ ಮುಪ್ಪು ಏರ್ಪಟ್ಟಾಗ ನಾನು ಬಂದು ತಿಳಿಸುತ್ತೇನೆಂದು ದೇವರು ಹೇಳಿದ್ದಾನೆ. ಆದರೇ ಮೂರು ಮತಗಳಲ್ಲಿ ಧರ್ಮಗಳು ಅಧರ್ಮಗಳಾಗಿ ಬದಲಾದಾಗಲ್ಲವೆ ದೇವರು ಬರಬೇಕಾಗಿರುವುದು. ಹಿಂದೂಗಳು ವಿಗ್ರಹಾರಾಧನೆ ಮಾಡುತ್ತಿದ್ದಾರೆ. ನಾವು ಏಕೇಶ್ವರೋಪಾಸನೆ ಮಾಡುತ್ತಿದ್ದೇವೆ. ದೇವರನ್ನು ಹೊರತು ಯಾರನ್ನೂ ಒಪ್ಪಿಕೊಳ್ಳುವುದಿಲ್ಲ ಎಂದು ಹೇಳುವ ಮುಸ್ಲಿಮ್‌ರು ಸರಿಯಾದ ಧರ್ಮದಲ್ಲಿ ಇದ್ದಂತೆ ಅಲ್ಲವೆ! ಆಗ ಧರ್ಮಗಳು ಭೂಮಿಮೇಲೆ ಇದ್ದಂತೆ ಅಲ್ಲವೆ! ಒಂದು ಮತದಲ್ಲಿ ಧರ್ಮಗಳು ಉಳಿದಿದ್ದರೂ ಧರ್ಮಗಳಿಗೆ ಗ್ಲಾನಿ ಇಲ್ಲದಂತೆ**

**ಅಲ್ಲವೆ! ಹಾಗಿರುವಾಗ ದೇವರು ಅವತರಿಸಿ ಬಂದು ಪುನಃ ತನ್ನ ಜ್ಞಾನವನ್ನು ಹೇಳಬೇಕಾದ ಅವಶ್ಯವಿಲ್ಲವಲ್ಲವೆ! ಇದಕ್ಕೆ ನೀವೇನನ್ನುತ್ತಿರಾ?**

**ಉತ್ತರ :–** ಭೂಮಿ ಮೇಲೆ ಧರ್ಮಗ್ಲಾನಿ ಏರ್ಪಟ್ಟಾಗ ನಾನು ಬರುತ್ತೇನೆ ಎಂದು ಹೇಳಿದ್ದಾನೆ ಆದರೆ, ಸಂಪೂರ್ಣವಾಗಿ ಇಲ್ಲದಂತೆ ಹೋದಾಗ ಬರುತ್ತೇನೆಂದು ದೇವರು ಹೇಳಲಿಲ್ಲ. ಧರ್ಮಗ್ಲಾನಿ ಎನ್ನುವುದು ಎಲ್ಲಿ ಏರ್ಪಟ್ಟರೂ ಅದನ್ನು ಸರಿಪಡಿಸುವುದು ದೇವರ ವಿಧಾನವಾಗಿ ಇದೆ. ದೇವರು ಯಾವಾಗ ಬರುತ್ತಾನೆನ್ನುವುದಕ್ಕೆ ಇಂತಹ ಸಮಯದಲ್ಲಿ ಬರುತ್ತಾನೆಂದು ಹೇಳಬಲ್ಲರು ಆದರೆ, ಆ ಅಂತಹ ಪರಿಸ್ಥಿತಿ ಎಲ್ಲಿದೆ ಎನ್ನುವುದೇ ಮುಖ್ಯವಾದ ಸಮಸ್ಯೆ. ಒಂದು ಹಿಂದೂ ಮತದಲ್ಲಿ ಧರ್ಮಗಳು ಇಲ್ಲದಂತೆ ಹೋಗಿ, ಇಸ್ಲಾಮ್ ಮತದಲ್ಲಿ ಧರ್ಮಗಳು ಭದ್ರವಾಗಿ ಇವೆಯಾ! ಎಂದು ನೋಡಬೇಕಾಗಿದೆ. ಹಾಗೇ ಕ್ರೈಸ್ತ ಮತದಲ್ಲಿ ಧರ್ಮಗಳಿಗೆ ಮುಪ್ಪು ಬರಲಿಲ್ಲವಾ? ಎಂದು ನೋಡಬೇಕಾಗಿದೆ. ಧರ್ಮಗಳ ವಿಷಯದಲ್ಲಿ ಒಂದು ಮತವನ್ನು ಸಮರ್ಥಿಸುವುದಕ್ಕಾಗಲೀ, ಒಂದು ಮತವನ್ನು ವಿಮರ್ಶಿಸುವುದಕ್ಕಾಗಲೀ ಅವಕಾಶವಿಲ್ಲ. ಎಲ್ಲಿ ಧರ್ಮಕ್ಕೆ ಲೋಪವಿದ್ದರೂ ಅದನ್ನು ದೇವರು ನೋಡಬಲ್ಲನು. ಮನುಷ್ಯರಾದ ನಾವು ಧರ್ಮಗಳ ವಿಷಯದಲ್ಲಿ ತಪ್ಪಾಗಿ ಅರ್ಥಸಿಕೊಂಡು ಧರ್ಮಗಳು ಇರುವ ಕಡೆ ಇಲ್ಲವೆಂದು, ಇಲ್ಲದ ಕಡೆ ಇವೆಯೆಂದು ಅಂದುಕೊಳ್ಳಬಹುದು. ಆದರೇ ದೇವರು ಹಾಗೆ ಅಂದು ಕೊಳ್ಳುವುದಿಲ್ಲ ಅಲ್ಲವೆ! ಧರ್ಮಗಳಿಗೆ ಲೋಪ ಎಲ್ಲಿ ಏರ್ಪಟ್ಟರೂ ಅಲ್ಲಿ ಅಧರ್ಮಗಳು ಇವೆಯೆಂದು ತಿಳಿಯಬಲ್ಲನು.

**15) ಪ್ರ :– ಧರ್ಮಗಳು ಯಾವ ಸ್ಥಾಯಿಯಲ್ಲಿ ಕಡಿಮೆಯಾದಾಗ ದೇವರು ಅವತರಿಸುತ್ತಾನೆ?**

**ಉತ್ತರ :–** ಕನಿಷ್ಟ ಶೇ. 90 ರಷ್ಟು ಧರ್ಮಗಳಿಗೆ ಮುಪ್ಪು ಏರ್ಪಟ್ಟಾಗ ದೇವರು ಅವತರಿಸಿ ಅವುಗಳನ್ನು ಪೂರ್ತಿ ಸ್ಥಾಯಿ ಧರ್ಮಗಳಾಗಿ ಬದಲಾಯಿಸಬೇಕಾಗಿದೆ. ದೇವರು ಬಂದು ಮಾತುಗಳ ರೂಪದಲ್ಲಿ ಹೇಳಿ ಧರ್ಮಗಳನ್ನು ಸರಿಮಾಡುವನು.

ಅಷ್ಟೇ ಹೊರತು ಶೇ. 10 ರಷ್ಟು ಅಧರ್ಮಗಳಿದ್ದು ಶೇ. 90 ರಷ್ಟು ಧರ್ಮಗಳಿರುವಾಗ ದೇವರು ಬರಬೇಕಾದ ಕೆಲಸವಿಲ್ಲ.

**16) ಪ್ರ :– ಇದಕ್ಕೂ ಮೊದಲು ಹಿಂದೂ ಮತದವರು ಅವರು ಅನುಸರಿಸುತ್ತಿರುವ ಭಗವದ್ಗೀತೆಯಲ್ಲಿ ಒಂದು ಕಡೆ ಒಂದು ಎರಡು ಶ್ಲೋಕಗಳಿಗೆ ಭಾವನೆ ಸರಿಯಾಗಿ ಇಲ್ಲವೆಂದು, ಅಲ್ಲೇ ಅಧರ್ಮ ಹುಟ್ಟುತ್ತಿದೆಯೆಂದು ಹೇಳಿದ್ದೀರ. ಭಗವದ್ಗೀತೆ ಎಷ್ಟೋ ದೊಡ್ಡದು, 700 ಶ್ಲೋಕಗಳೊಂದಿಗೆ ಇದೆ. ಅದರಲ್ಲಿ ಒಂದು, ಎರಡು ಶ್ಲೋಕಗಳ ಭಾವನೆ ಸರಿಯಾಗಿ ಇಲ್ಲದಂತೆ ಹೋದಷ್ಟು ಮಾತ್ರಕ್ಕೆ ಧರ್ಮ ಗಳೆಲ್ಲವುಗಳಿಗೂ ಮುಪ್ಪು ಬಂದಂತೆ ಅಲ್ಲ ಅಲ್ಲವೆ! ನಿಮ್ಮ ಮಾತಿನ ಪ್ರಕಾರ ಶೇ.90 ರಷ್ಟು ಅಧರ್ಮಗಳು ಬಂದಾಗಲೇ ದೇವರು ಅವತರಿಸುತ್ತಾನೆಂದು ಹೇಳಿದ್ದೀರ. ಶೇ. 90 ರಷ್ಟು ಅಧರ್ಮಗಳು ಯಾವಾಗ ಉಂಟಾಗುತ್ತವೆ? ದೇವರು ಯಾವಾಗ ಹುಟ್ಟಿ ಬರುತ್ತಾನೆ?**

**ಉತ್ತರ :–** ಯಾವುದು ಧರ್ಮ, ಯಾವುದು ಅಧರ್ಮ ಎಂದು ತಿಳಿಯದ ಮನುಷ್ಯನಿಗೆ ಶೇ.90ರಷ್ಟು ಧರ್ಮಗಳು ಅಧರ್ಮಗಳಾಗಿ ಯಾವಾಗ ಬದಲಾಗಿವೆ ಎಂದು ಹೇಳಬಲ್ಲನು!! ಧರ್ಮಗಳ ವಿಷಯ ಪೂರ್ತಿಯಾಗಿ ಯಾವ ಮಾನವನಿಗೂ ತಿಳಿದಿಲ್ಲ. ಆದ್ದರಿಂದ ದೇವರ ಬರುವಿಕೆಯನ್ನು ಯಾರೂ ಹೇಳಲಾರನು. ದೇವರ ಧರ್ಮಗಳ ವಿಷಯದಲ್ಲಿ ನಿರ್ಣಯಾಧಿಕಾರಿ ದೇವರೇ ಆಗಿರುವುದರಿಂದ ಧರ್ಮಗಳಾವುವೋ ಅಧರ್ಮಗಳಾವುವೋ ಆತನೇ ಗುರುತಿಸಬಲ್ಲನು. ಮನುಷ್ಯನಿಗೆ ಧರ್ಮಗಳನ್ನು ಅಧರ್ಮಗಳನ್ನು ಗುರುತಿಸುವ ಶಕ್ತಿ ಇಲ್ಲ. ಆದ್ದರಿಂದ ಯಾವ ಬೋಧಕನು ಅಧರ್ಮವನ್ನು ಹೇಳಿದರೂ ಇದು ಧರ್ಮವಾ ಅಲ್ಲವಾ! ಎಂದು ನೋಡದಂತೆ ಅದನ್ನು ನಂಬಬಲ್ಲನು. ಹಾಗೆಯೇ ಧರ್ಮವನ್ನು ಹೇಳಿದರೂ ನಂಬಬಲ್ಲನು. ಕೇಳಿರುವುದು ಧರ್ಮವಾ ಅಲ್ಲವಾ! ಎಂದು ನೋಡಿಕೊಳ್ಳುವ ಸಾಮರ್ಥ್ಯ ಮನುಷ್ಯನಿಗೆ ಇಲ್ಲ. ಆದ್ದರಿಂದ ಸುಲಭವಾಗಿ ಅಧರ್ಮಗಳನ್ನು ಧರ್ಮಗಳೆಂದು ನಂಬುತ್ತಿದ್ದಾನೆ. ತಾನು ನಂಬಿದ ಅಧರ್ಮಗಳನ್ನೇ ಧರ್ಮಗಳೆಂದು ವಾದಿಸುತ್ತಿದ್ದಾನೆ.

**17) ಪ್ರ :– ಎಲ್ಲ ಮತಗಳಲ್ಲಿಯೂ ಒಂದೇ ಸ್ಥಾಯಿ ಧರ್ಮಗಳಿವೆಯಾ? ಅಥವಾ ಒಂದೊಂದು ಮತದಲ್ಲಿ ಒಂದೊಂದು ಸ್ಥಾಯಿ ಧರ್ಮಗಳಿವೆಯಾ? ಹಿಂದೂ ಮತದಲ್ಲಿ ಶೇ. 100ರಷ್ಟು ಧರ್ಮಗಳಿದ್ದು, ಕ್ರೈಸ್ತ ಮತದಲ್ಲಿ ಸ್ವಲ್ಪ ಕಡಿಮೆಯಾಗಿ ಶೇ. 80ರಷ್ಟು ಧರ್ಮಗಳು, ಇಸ್ಲಾಮ್ ಮತದಲ್ಲಿ ಶೇ.70 ಅಥವಾ 90 ಅಥವಾ 100, 120 ರಷ್ಟು ಆದರೂ ಇರಬಹುದಾ? ಮತಕ್ಕೆ ಧರ್ಮಗಳ ಸಂಖ್ಯೆಯಲ್ಲಿ ವ್ಯತ್ಯಾಸವಿದೆಯಾ?**

**ಉತ್ತರ :–** ದೇವರು ಎಲ್ಲರಿಗೂ ಒಬ್ಬನೇ ಆದ್ದರಿಂದ ಯಾವ ಮತದಲ್ಲಾದರೂ ಒಂದೇ ಸ್ಥಾಯಿ ಧರ್ಮಗಳಿರುತ್ತವೆ ಆದರೆ, ಮತ ಮತಕ್ಕೂ ಬೇರೆಬೇರೆ ಸ್ಥಾಯಿ ಧರ್ಮಗಳು ಇರುವುದಿಲ್ಲ. ಎಲ್ಲ ಮತಗಳಿಗು ದೇವರು ಒಬ್ಬನೇ, ಧರ್ಮಗಳು ಒಂದೇ ಇರುತ್ತವೆ.

**18) ಪ್ರ :– ಹಿಂದೂ ಸಮಾಜದಲ್ಲಿ ಕೆಲವು ಧರ್ಮಗಳು ಬದಲಾಗಿವೆ ಎಂದು ಸಾಕ್ಷ್ಯವಾಗಿ ಭಗವದ್ಗೀತೆಯಲ್ಲಿ ಎರಡು ಶ್ಲೋಕಗಳನ್ನು ತೋರಿಸಿದ್ದೀರ. ಗೀತೆಯಲ್ಲಿನ ಎರಡು ಶ್ಲೋಕಗಳ ವಿವರವೇ ಬದಲಾಗಿದೆಯಾ? ಅಥವಾ ಭಗವದ್ಗೀತೆಯಲ್ಲಿನ ದೇವರ ಭಾವನೆಗಳು ಮನುಷ್ಯರಲ್ಲಿ ಇನ್ನೂ ಹೆಚ್ಚಾಗಿ ಬದಲಾಗಿವೆಯಾ?**

**ಉತ್ತರ :–** ಎರಡು ಶ್ಲೋಕಗಳ ಭಾವನೆಗಳು ಬದಲಾಗಿವೆ ಎಂದು ನಾವು ಹೇಳುತ್ತಿದ್ದೇವೆ. ಸೃಷ್ಠಿ ಆದಿಯಲ್ಲಿ ದೇವರು ಜ್ಞಾನವನ್ನು ಹೇಳಿದ ನಂತರ ಜ್ಞಾನವನ್ನು ಪ್ರಜೆಗಳೆಲ್ಲರೂ ತಿಳಿದುಕೊಂಡಿದ್ದಾರೆ. ಇದು ಕೃತ ಯುಗದ ಆರಂಭದಲ್ಲಿನ ಮಾತು. ನಂತರ ಎರಡು ಯುಗಗಳು ಕಳೆದುಹೋಗಿವೆ. ಸುಮಾರು 38,80,000 ವರ್ಷಗಳು ಕಳೆದು ಹೋದಾಗ, ಅಂದರೆ ದ್ವಾಪರ ಯುಗದ ಕೊನೆಯಲ್ಲಿ ಧರ್ಮಗಳಿಗೆ ಮುಪ್ಪು ಏರ್ಪಟ್ಟಿದೆಯೆಂದು ಭೂಮಿ ಮೇಲೆಗೆ ದೇವರು ಭಗವಂತನಾಗಿ ಬಂದು ಪುನಃ ತನ್ನ ಜ್ಞಾನವನ್ನು ಹೇಳಿ ಹೋಗಿದ್ದಾನೆ. ಹಾಗೆ ಹೇಳಿ ಹೋಗಿ ಸುಮಾರು 5150 ವರ್ಷಗಳು ಕಳೆದುಹೋಗಿವೆ. ಆದರೇ ಇಷ್ಟು ಕಾಲಕ್ಕೆ ಅಲ್ಲಲ್ಲಿ ಧರ್ಮಗಳನ್ನು ಮನುಷ್ಯ ಅಧರ್ಮಗಳಾಗಿ ಅರ್ಥ ಮಾಡಿಕೊಂಡಂತೆ ತಿಳಿಯುತ್ತಿದೆ. ಇದು ಹಿಂದೂ ಸಮಾಜವೊಂದರ ಚರಿತ್ರೆಯಾ

ದಾಗ, ಇನ್ನು ಉಳಿದ ಮತ ಸಮಾಜಗಳ ವಿಷಯಕ್ಕೆ ಬಂದರೆ ಮುಸ್ಲಿಮ್‌ರ ಮತವನ್ನು ಪರಿಶೀಲಿಸಿದರೆ ಅವರಿಗೆ 1400 ವರ್ಷಗಳ ಸಮಯದಲ್ಲಿಯೇ ಜಿಬ್ರಯೇಲ್‌ನಿಂದ ದೇವರ ಧರ್ಮಗಳು ತಿಳಿಯಲ್ಪಟ್ಟಿವೆ. ಮೊದಲು ಹಿಂದೂಗಳಿಗೆ ದೇವರು ಹೇಳಿದ ಧರ್ಮಗಳು ಪೂರ್ತಿಯಾಗಿ ತಿಳಿಯುವುದಕ್ಕೆ, ಎಲ್ಲರೂ ಅರ್ಥಮಾಡಿಕೊಳ್ಳುವುದಕ್ಕೆ, ಬಹುಶಃ ಏಳು ಅಥವಾ ಎಂಟು ಸಾವಿರ ವರ್ಷಗಳು ಹಿಡಿದಿರಬಹುದು. ಎಲ್ಲರಿಗೂ ದೇವರ ಜ್ಞಾನ ತಿಳಿದ ನಂತರ ಅದು ಶೇ.90ರಷ್ಟು ಅಜ್ಞಾನವಾಗಿ ಬದಲಾಗುವುದಕ್ಕೆ, ಅಧರ್ಮಗಳಾಗಿ ಬದಲಾಗುವುದಕ್ಕೆ ಸುಮಾರು 38 ಲಕ್ಷಗಳ 80 ಸಾವಿರ ವರ್ಷಗಳ ಕಾಲ ಹಿಡಿದಿದೆ. ಅಷ್ಟು ಕಾಲ ಕಳೆದ ನಂತರ ಪುನಃ ಧರ್ಮಗಳಿಗೆ ಮುಪ್ಪು ಏರ್ಪಟ್ಟಿದೆ. ಆಗ ದೇವರು ಬಂದು ಧರ್ಮ ಸಂಸ್ಥಾಪನೆ ಮಾಡಿದ್ದಾನೆ. ಈಗ ಮುಸ್ಲಿಮ್ ಮತದಲ್ಲಿ ಜ್ಞಾನವನ್ನು ಹೇಳಿ ಕೇವಲ 1400 ವರ್ಷಗಳೇ ಆಗಿದೆ. ಹೇಳಿದ ಜ್ಞಾನ ಅವರಿಗೆ ತಿಳಿಯುವುದಕ್ಕೆ ಎಂಟು ಸಾವಿರ ವರ್ಷಗಳು ಹಿಡಿಯುತ್ತದೆ. ಅಲ್ಲಿಗೆ ಧರ್ಮಗಳು ಅವರಿಗೆ ಅರ್ಥವಾಗಬಲ್ಲವು ಎಂದುಕೊಳ್ಳೋಣ! ನಂತರ ಕೆಲವು ಲಕ್ಷಗಳ ವರ್ಷಗಳಿಗೆ ಧರ್ಮಗಳಿಗೆ ಗ್ಲಾನಿ ಏರ್ಪಡಬಹುದು. ಈಗಾದರೆ ಅವರು ಪ್ರಾಥಮಿಕ ದಶೆಯಲ್ಲಿ ಇದ್ದಾರೆ. ಅವರು ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿಯುವುದಕ್ಕೆ ಹಿಂದೂಗಳ ಹಾಗೆ ಏಳು ಅಥವಾ ಎಂಟು ಸಾವಿರ ವರ್ಷಗಳು ಹಿಡಿಯುತ್ತ ವೇನೋ! ಹೇಳಲಾರೆವು.

**19) ಪ್ರ :– ಖುರಾನ್ ಗ್ರಂಥ ಅಂತಿಮ ದೈವಗ್ರಂಥವಲ್ಲವೆ! ಅದರಲ್ಲಿರುವ ಜ್ಞಾನ ಮುಸ್ಲಿಮ್‌ರಿಗೆ ತಿಳಿದಿಲ್ಲವೆನ್ನುತ್ತೀರಾ? ಅವರು ಸಂಪೂರ್ಣವಾಗಿ ಕಲಿಯುವುದಕ್ಕೆ, ತಿಳಿದುಕೊಳ್ಳುವುದಕ್ಕೆ ಸಾವಿರ ವರ್ಷಗಳು ಹಿಡಿಯುತ್ತದೆನ್ನುತ್ತೀರಾ?**

**ಉತ್ತರ :–** ದೈವಜ್ಞಾನ ಗ್ರಂಥರೂಪದಲ್ಲಿ ಕೆಲವು ನೂರು ವರ್ಷಗಳ ಕೆಳಗೇ ಅವರ ಹತ್ತಿರಕ್ಕೆ ಬಂದಿದೆ. ಹಾಗೆ ಬಂದಿರುವ ಜ್ಞಾನವನ್ನು ಮುಸ್ಲಿಮ್‌ರು ತಮ್ಮ ಜ್ಞಾನವೆಂದುಕೊಂಡಿದ್ದಾರೆ. ಆ ಗ್ರಂಥವನ್ನು ತಮ್ಮ ಗ್ರಂಥವೆಂದುಕೊಂಡಿದ್ದಾರೆ. ಈ ದಿನ ಮುಸ್ಲಿಮ್ ಸಮಾಜದಲ್ಲಿರುವ ವ್ಯಕ್ತಿಗಳಲ್ಲಿ ಸುಮಾರು ಖುರಾನ್ ಗ್ರಂಥ ಎಲ್ಲರಿಗೂ ತಿಳಿದಿದೆ ಆದರೆ ಅವರಲ್ಲಿ ಅರ್ಧಕ್ಕಿಂತ ಹೆಚ್ಚು ಜನರು

ಖುರಾನ್ ಓದಿರಬಹುದು. ಹಿಂದೂಗಳು ಭಗವದ್ಗೀತೆಯನ್ನು ಗೌರವಿಸುವುದಕ್ಕಿಂತ ಹೆಚ್ಚಾಗಿ ಮುಸ್ಲೀಮ್‌ರು ಖುರಾನ್ ಗ್ರಂಥವನ್ನು ಗೌರವಿಸುತ್ತಾರೆ. ದೇವರಿಗೆ ಕೊಟ್ಟಿರುವ ಗೌರವವನ್ನು ಖುರಾನ್ ಗ್ರಂಥಕ್ಕೆ ಕೊಡುತ್ತಾರೆ. ಏಕೆಂದರೆ! ಅದರಲ್ಲಿ ಅಲ್ಲಾಹ್ ವಾಕ್ಯಗಳು ಇವೆಯೆಂದು ಅವರ ನಂಬಿಕೆ. ಇಸ್ಲಾಮ್ ಸಮಾಜ 'ವಿಶ್ವಾಸ' ಎನ್ನುವುದರ ಮೇಲೆ ಆಧಾರಪಟ್ಟು ಮುಂದಕ್ಕೆ ಹೋಗುತ್ತಿದೆ. ಮನುಷ್ಯನಿಗೆ ಪ್ರಾಥಮಿಕವಾಗಿ ದೇವರ ಮೇಲೆ ವಿಶ್ವಾಸವಿರುವುದು ಅವಶ್ಯಕ. ದೇವರ ಮೇಲೆ ವಿಶ್ವಾಸದಲ್ಲಿ ಮುಸ್ಲಿಮ್‌ರು ಮೊದಲ ಸ್ಥಾನವನ್ನು ಸಂಪಾದಿಸಿದ್ದಾರೆಂದು ಹೇಳಬಹುದು. ಎಷ್ಟೋ ವಿಶ್ವಾಸದಿಂದ ಇರುವ ಮುಸ್ಲಿಮ್‌ರು ಅರ್ಥಕ್ಕಿಂತ ಮೇಲ್ಪಟ್ಟು ಖುರಾನ್ ಗ್ರಂಥವನ್ನು ಓದಿದ್ದಾರೆ. ಬಹಳ ಜನ ಗ್ರಂಥದಲ್ಲಿನ ಆಯತ್‌ಗಳನ್ನು ಕಂಠಾಪಾಟ ಮಾಡಿಕೊಂಡಿದ್ದಾರೆ. ಕೆಲವರು ಎಷ್ಟೋ ಜ್ಞಾಪಕಶಕ್ತಿ ಹೊಂದಿದ್ದು ಖುರಾನ್ ಗ್ರಂಥದಲ್ಲಿ ಯಾವ ವಾಕ್ಯ ಎಲ್ಲಿದೆಯೋ, ಯಾವ ಆಯತ್ ಯಾವ ಸೂರಾದಲ್ಲಿ ಇದೆಯೋ ನೋಡದೇ ಹೇಳುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಆ ವಿಧವಾಗಿ ಇದ್ದರೂ ಗ್ರಂಥದಲ್ಲಿನ ದೇವರ ಧರ್ಮಗಳು ಅವರಿಗೆ ಪೂರ್ತಿ ಅವಗಾಹನೆಗೆ ಬರಲಿಲ್ಲವೆಂದು ಹೇಳಬಹುದು. ಗ್ರಂಥದಲ್ಲಿನ ವಾಕ್ಯಗಳಲ್ಲಿ ಜ್ಞಾನ ಮಿಳಿತವಾಗಿರುತ್ತದೆ. ಹಾಗೆ ಇರುವ ಜ್ಞಾನದಲ್ಲಿ ಧರ್ಮಗಳು ಮಿಳಿತವಾಗಿರುತ್ತವೆ. ದೇವರ ಪ್ರತಿ ವಾಕ್ಯದಲ್ಲೂ ಒಂದು ಧರ್ಮವಿರುವುದಿಲ್ಲ. ಕೆಲವು ವಾಕ್ಯಗಳ ಕೂಟಮಿಯಲ್ಲಿ ಒಂದು ಧರ್ಮ ಮಿಳಿತವಾಗಿರಬಹುದು. ಒಂದು ಧರ್ಮವನ್ನು ತಿಳಿಯುವುದಕ್ಕೆ ಎಷ್ಟೋ ಜ್ಞಾನ ತಿಳಿಯಬೇಕಾಗಿರುತ್ತದೆ.

ದೇವರ ಜ್ಞಾನವನ್ನು ಗ್ರಂಥದಲ್ಲಿ ನೋಡಿ ಹೇಳಿದರೂ, ನೋಡದೇ ಹೇಳಿದರೂ ಅದರಲ್ಲಿ ಗ್ರಹಿಸಿಕೊಂಡ ಜ್ಞಾನ ಮುಖ್ಯವೇ ಹೊರತು, ಜ್ಞಾಪಕ ಶಕ್ತಿ ಮುಖ್ಯವಲ್ಲ. ವಿಶ್ವಾಸದಿಂದ ದೇವರು ದೊಡ್ಡವನೆಂದು ತಿಳಿಯುತ್ತದೆ. ಹಾಗೆಯೇ ಮನುಷ್ಯನಲ್ಲಿನ ದೇವರ ಮೇಲೆ ಶ್ರದ್ಧೆಯಿಂದ ದೇವರ ಜ್ಞಾನ ತಿಳಿಯುತ್ತದೆ. ತಿಳಿದ ಜ್ಞಾನವನ್ನು ಅನುಸರಿಸಿ ಅದರಲ್ಲಿ ಧರ್ಮವೊ ಅಧರ್ಮವೋ ಇರುತ್ತದೆ. ಗ್ರಂಥದಲ್ಲಿನ ಜ್ಞಾನವು ಸರಿಯಾಗಿ ಅರ್ಥವಾದರೆ ಅಲ್ಲಿ ಮನುಷ್ಯನಿಗೆ ಧರ್ಮ ತಿಳಿಯಲ್ಪಡುತ್ತದೆ. ಸರಿಯಾಗಿ ಅರ್ಥವಾಗದಿದ್ದರೆ ಬೇರೆ ರೀತಿಯಲ್ಲಿ

ಅರ್ಥವಾಗಿದ್ದರೆ ಅದನ್ನನುಸರಿಸಿ ಅವನಿಗೆ ಅಧರ್ಮವು ತಿಳಿಯಲ್ಪಡುತ್ತದೆ. ಯಾವಾಗಾದರೇ ದೇವರ ಜ್ಞಾನವನ್ನು ಮನುಷ್ಯ ದೇವರು ಹೇಳಿದ ಭಾವನೆಯ ಪ್ರಕಾರ ತಿಳಿಯುತ್ತಾನೋ ಆಗ ಆತನಿಗೆ ದೇವರ ಧರ್ಮ ತಿಳಿದಿದೆಯೆಂದು ಹೇಳಬಹುದು. ಜ್ಞಾನ ತಿಳಿಯಬೇಕೆಂದರೇ ಮನುಷ್ಯನಿಗೆ ದೇವರ ಜ್ಞಾನದ ಮೇಲೆ ಶ್ರದ್ಧೆ ಇರಬೇಕು. **ದೇವರ ಜ್ಞಾನದ ಮೇಲೆ ಶ್ರದ್ಧೆ ಇಲ್ಲದೆ ಹೋದರೆ ದೇವರ ಧರ್ಮಗಳು ತಿಳಿಯುವ ಅವಕಾಶವೇ ಇಲ್ಲ.** ಪ್ರಸ್ತುತ ಕಾಲದಲ್ಲಿ ಮುಸ್ಲಿಮ್‌ರಲ್ಲಿ ದೇವರ ಜ್ಞಾನದ ಮೇಲೆ ಶ್ರದ್ಧೆ ಕಡಿಮೆಯಾಗಿ ಇರುವುದರಿಂದ ದೇವರ ಧರ್ಮಗಳು ಇನ್ನೂ ಪೂರ್ತಿ ತಿಳಿದಿಲ್ಲವೆಂದು ಹೇಳಬಹುದು.

**20) ಪ್ರ :– ಮುಸ್ಲಿಮ್ ಸಮಾಜದಲ್ಲಿ ದೇವರ ಮೇಲೆ ವಿಶ್ವಾಸ ಹೆಚ್ಚಾಗಿ ಇದೆಯೆಂದು ನೀವೇ ಹೇಳಿದ್ದೀರಲ್ಲವೆ! ದೇವರನ್ನು ವಿಶ್ವಾಸಿಸಿದವರಿಗೆ ದೇವರ ಜ್ಞಾನ ತಿಳಿದಿಲ್ಲವೆನ್ನುತ್ತೀರಾ?**

**ಉತ್ತರ :–** ಈ ವಿಷಯ ನಿಮಗೆ ಅರ್ಥವಾಗುವುದಕ್ಕೆ ಹೇಳುತ್ತಿದ್ದೇನೆ ಹೊರತು ವಾದಿಸುವುದಕ್ಕೆ ಅಲ್ಲ. ಭಕ್ತಿ, ಶ್ರದ್ಧೆಗಳು ಎನ್ನುವವು ಪ್ರತಿ ಮನುಷ್ಯನಲ್ಲಿ ಇರುತ್ತವೆ. ಆದರೆ ಅವು ಇರುವ ಅಳತೆಗಳು ಬೇರೆಬೇರೆಯಾಗಿ ಇರುತ್ತವೆ. ಮುಸ್ಲಿಮ್‌ರು ವಿಶ್ವಾಸದಲ್ಲಿ ದೊಡ್ಡವರೆಂದು ನಾವು ಮೊದಲೇ ಹೇಳಿದ್ದೇವೆ. ಭಕ್ತಿ ಎಂದರೇ ವಿಶ್ವಾಸವೆಂದು ಅರ್ಥ. ದೇವರ ಮೇಲೆ ಭಕ್ತಿ (ವಿಶ್ವಾಸ) ಇರುವವರೆಲ್ಲರಿಗೂ ಶ್ರದ್ಧೆ ಇರುತ್ತದೆಂದು ಹೇಳಲಾರೆವು. ಕಾರಣವೇನೆಂದರೇ! ಭಕ್ತಿ ಬೇರೆ, ಶ್ರದ್ಧೆ ಬೇರೆಯಾಗಿರುವುದೇ ಎಂದು ಹೇಳಬಹುದು. ಭಕ್ತಿ, ಶ್ರದ್ಧೆಗಳು ಬೇರೆಬೇರೆ. ಭಕ್ತಿ ಇರುವವನಿಗೆ ಶ್ರದ್ಧೆ ಇರುತ್ತದೆಂದು ಹೇಳಲಾರೆವು. ಶ್ರದ್ಧೆ ಇರುವವನಿಗೆ ಭಕ್ತಿ ಇರಬಹುದು, ಇರದೇ ಹೋಗಬಹುದು. ಇಲ್ಲಿ ಚಿಕ್ಕ ಉದಾಹರಣೆ ಹೇಳಿಕೊಳ್ಳೋಣ. ಒಬ್ಬನಿಗೆ ಸೇಬಿನ ಹಣ್ಣು ಎಂದರೆ ಬಹಳ ಗೌರವ. ಗೌರವವಿರುವ ಕಡೆ ಭಕ್ತಿ ಇರುತ್ತದೆ. ಸೇಬು ಹಣ್ಣಿನ ಮೇಲೆ ಗೌರವವಿರುವುದರಿಂದ ಅದರ ಮೇಲೆ ವಿಶ್ವಾಸವೂ ಸಹ ಆತನಿಗೆ ಇದೆ. ಆ ವಿಶ್ವಾಸದಿಂದ ಸೇಬಿನ ಹಣ್ಣು ದೊಡ್ಡದೆಂದು, ಅದರೊಂದಿಗೆ ಯಾವ ಹಣ್ಣು ಸಾಟಿ ಬರುವುದಿಲ್ಲವೆಂದು, ಅದರಲ್ಲಿರುವಷ್ಟು ಪೋಷಕಪದಾರ್ಥಗಳು ಯಾವ

ಹಣ್ಣಿನಲ್ಲಿಯೂ ಇರುವುದಿಲ್ಲವೆಂದು, ಮರದಿಂದ ಬೇರ್ಪಡಿಸಿದ ನಂತರವೂ ಸಹ ಅದು ಕೆಟ್ಟುಹೋಗದೇ ಎಷ್ಟು ದಿನಗಳಾದರೂ ನೆಲೆ ಇರುತ್ತದೆಂದು, ಹಾಗೆ ಯಾವ ಹಣ್ಣು ಇರುವುದಿಲ್ಲವೆಂದು, ಸೇಬನ್ನು ಹೊಗಳುವುದೇ ಆತನ ಕೆಲಸವಾಗಿ ಇಟ್ಟುಕೊಂಡಿದ್ದಾನೆ. ಹಾಗೆ ಸೇಬನ್ನು ದೊಡ್ಡದಾಗಿ ಹೇಳುವುದು ಹೊರತು ಅದನ್ನು ತಿನ್ನಬೇಕೆನ್ನುವ ಆಲೋಚನೆ ಆತನಲ್ಲಿ ಇಲ್ಲ. ಆದರೆ ಆತನ ಸ್ನೇಹಿತನು ಈತನು ಹೇಳುವ ಮಾತುಗಳೆಲ್ಲ ಕೇಳಿ ಸೇಬು ದೊಡ್ಡದೇ ಎಂದು ಒಪ್ಪಿಕೊಳ್ಳುತ್ತಾನೆ ಆದರೆ ಆತನೊಳಗೆ ಅದನ್ನು ತಿನ್ನಬೇಕೆಂದು, ಅದರ ರುಚಿಯನ್ನು ಅನುಭವಿಸಬೇಕೆಂದು ಅಂದುಕೊಳ್ಳುತ್ತಿದ್ದನು. ಅವರಿಬ್ಬರಲ್ಲಿ ಆಪಿಲ್ ಸೇಬಿನ ಮೇಲೆ ವಿಶ್ವಾಸ ಇರುವವನು ಅದನ್ನು ಹೊಗಳುವುದು ಹೊರತು ಏನೂ ಮಾಡಲಿಲ್ಲ. ಆದರೇ ಅವರಲ್ಲಿ ಒಬ್ಬನು ಸೇಬನ್ನು ತಿನ್ನಬೇಕೆಂದುಕೊಂಡಿದ್ದಾನೆ. ಅದರಲ್ಲಿನ ರುಚಿಯನ್ನು ನೋಡಬೇಕೆಂದು ಕೊಂಡಿದ್ದಾನೆ. ಅದರ ಪೋಷಕಪದಾರ್ಥಗಳ ಶಕ್ತಿಯನ್ನು ಪಡೆಯಬೇಕೆಂದು ಕೊಂಡಿದ್ದಾನೆ. ಆ ವಿಧವಾಗಿ ಸೇಬು ಹಣ್ಣನ್ನು ಇಷ್ಟಪಟ್ಟಿದ್ದಾನೆ. ಅತನ ಇಷ್ಟ (ಶ್ರದ್ಧೆ) ಪ್ರಕಾರ ಆತನು ಸೇಬನ್ನು ತಿಂದು ಅದರ ರುಚಿಯನ್ನು ನೋಡಿ, ಅದರ ಶಕ್ತಿಯನ್ನು ಹೊಂದಿದ್ದಾನೆ. ಉಳಿದವನು ಸೇಬನ್ನು ಹೊಗಳುತ್ತಾ ಅದರ ದೊಡ್ಡಸ್ತಿಕೆಯನ್ನು ಹೇಳಿಕೊಳ್ಳುವುದಕ್ಕೇ ಪರಿಮಿತವಾಗಿದ್ದಾನೆ. ಹಾಗೆಯೇ ದೇವರ ಮೇಲೆ ಭಕ್ತಿ ಇರುವವನು ದೇವರನ್ನು ಹೊಗಳುತ್ತಲೇ ಕಾಲ ಕಳೆಯುತ್ತಿರುವನು ಆದರೆ, ದೇವರೊಳಗೆ ಐಕ್ಯವಾಗಬೇಕೆಂದು, ದೇವರ ಶಕ್ತಿಯನ್ನು ಹೊಂದಬೇಕೆಂದು ಅಂದುಕೊಳ್ಳುವುದಿಲ್ಲ. ದೇವರ ಮೇಲೆ ಶ್ರದ್ಧೆ ಇರುವವನು ಮಾತ್ರವೇ ದೇವರನ್ನು ಹೊಗಳುವುದು ಇಲ್ಲದಂತೆ, ದೇವರನ್ನು ತಿಳಿಯುವುದಕ್ಕೆ ಪ್ರಯತ್ನಿಸುತ್ತಿರುವನು. ದೇವರನ್ನು ತಿಳಿದು ದೇವರ ಶಕ್ತಿಯನ್ನು ಹೊಂದುವನು. ಈ ವಿಧವಾಗಿ ದೇವರ ಬಗ್ಗೆ ಭಕ್ತಿ ಶ್ರದ್ಧೆಗಳು ಇವೆ. ಇದನ್ನನುಸರಿಸಿ **ಭಕ್ತಿಗಿಂತ ಶ್ರದ್ಧೆ ದೊಡ್ಡದೆಂದು ತಿಳಿಯುತ್ತಿದೆ.** ದೇವರ ಮೇಲೆ ಭಕ್ತಿ ಇರುವವನು ಭಕ್ತನು ಮಾತ್ರವೇ ಆಗುತ್ತಾನೆ. ಶ್ರದ್ಧೆ ಇರುವವನು ಯುಕ್ತನಾಗುತ್ತಾನೆ. ಯುಕ್ತನೆಂದರೇ ಬೆರೆತವನೆಂದು ಅರ್ಥ. ಭಕ್ತಿ ಇರುವವನು ದೂರವಾಗಿ ಇರುವವನೇ ಆಗುತ್ತಾನೆ. ಶ್ರದ್ಧೆ ಇರುವವನು

ದೂರವಾಗಿ ಇರದೇ ಬೆರೆತು ಹೋದವನಾಗುತ್ತಾನೆ. ದೇವರನ್ನು ವಿಶ್ವಾಸಿಸಿದವನಿಗೆ ದೇವರು ದೊಡ್ಡವನೆಂದು ದೇವರು ಸೃಷ್ಠಿಕರ್ತಯೆಂದು, ದೇವರೊಂದಿಗೆ ಸಮಾನವಾದವರು ಯಾರೂ ಇಲ್ಲವೆಂದು, ದೇವರು ಎಲ್ಲರಿಗಿಂತ ದೊಡ್ಡವನೆಂದು ಹೊಗಳುವುದಕ್ಕೆ ಸರಿಹೋಗುತ್ತದೆ ಆದರೆ, ಸ್ವತಃವಾಗಿ ದೇವರನ್ನು ತಿಳಿಯಲಾರರು! ದೇವರ ಶಕ್ತಿಯನ್ನು ಹೊಂದಲಾರರು!!

**21) ಪ್ರ :– ಹೊಗಳಿಕೆಗಳಿಗೇ ಪರಿಮಿತವಾಗದೆ ದೇವರ ಶಕ್ತಿಯನ್ನು ಹೊಂದಬೇಕೆಂದರೆ ಮುಸ್ಲಿಮ್‌ರು ಏನು ಮಾಡಬೇಕು?**

**ಉತ್ತರ :–** ದೇವರ ಮೇಲೆ ವಿಶ್ವಾಸಕ್ಕಿಂತ ದೇವರನ್ನು ತಿಳಿಯಬೇಕೆನ್ನುವ ಶ್ರದ್ಧೆಯನ್ನು ಬೆಳಸಿಕೊಳ್ಳಬೇಕು.

**22) ಪ್ರ :– ಇಂದಿನಿಂದ ನೀವು ಹೇಳಿದಂತೆ ನಾನು ಶ್ರದ್ಧೆಯನ್ನು ಬೆಳಸಿಕೊಳ್ಳುತ್ತೇನೆ. ನಾನು ಮುಸ್ಲಿಮ್ ಆದರೂ ವಿಶ್ವಾಸಕ್ಕಿಂತ ಶ್ರದ್ಧೆಯನ್ನೇ ಹೆಚ್ಚಾಗಿ ಇಟ್ಟುಕೊಳ್ಳುತ್ತೇನೆ. ಆದರೆ ನಾನು ಎಷ್ಟು ಕಾಲದಲ್ಲಿ ದೇವರನ್ನು ತಿಳಿಯಬಲ್ಲೆನು? ದೇವರ ಶಕ್ತಿಯನ್ನು ಎಷ್ಟು ಕಾಲದಲ್ಲಿ ಹೊಂದುವೆನು?**

**ಉತ್ತರ :–** ದೇವರ ವಿಷಯದಲ್ಲಿ ಅವಸರಪಟ್ಟರೆ ಪ್ರಯೋಜನವಿಲ್ಲ. ಸೃಷ್ಠಿ ಆದಿಯಲ್ಲಿ ದೇವರು ಮನುಷ್ಯರಿಗೆ ಜ್ಞಾನವನ್ನು ಒದಗಿಸಿದಾಗ ಅದು ಒಂದೇಬಾರಿ ಮನುಷ್ಯರನ್ನು ಸೇರಲಿಲ್ಲ. ಕೃತ ಯುಗದಲ್ಲಿ ದೇವರು ಕೊಟ್ಟಿರುವ ಜ್ಞಾನವನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಸುಮಾರು ಎಂಟು ಸಾವಿರ ವರ್ಷಗಳು ಹಿಡಿದಿದೆ. ಎಂಟು ಸಾವಿರ ವರ್ಷಗಳಿಗೆ ಪ್ರಜೆಗಳೆಲ್ಲರೂ ಸಂಪೂರ್ಣ ಜ್ಞಾನಿಗಳಾಗಿ ಬದಲಾಗಿ ಹೋಗಿದ್ದಾರೆ. ದೇವರ ಜ್ಞಾನವನ್ನು ಹೊಂದಿದ ಮನುಷ್ಯರು ಪುನಃ ಅಧರ್ಮವನ್ನು ಹೊಂದುವುದಕ್ಕೆ 38,80,000 ವರ್ಷಗಳು ಹಿಡಿದಿದೆ. 38 ಲಕ್ಷಗಳ 80 ಸಾವಿರ ವರ್ಷಗಳಿಗೆ ಜ್ಞಾನಿಗಳೆಲ್ಲರೂ ಅಜ್ಞಾನಿಗಳಾಗಿ ಬದಲಾಗಿ ಹೋಗಿ ಅಧರ್ಮವನ್ನು ಹೊಂದಿದವರಾಗಿದ್ದಾರೆ. ಮನುಷ್ಯರಿಗೆ ಧರ್ಮಗಳು ತಿಳಿಯದಂತೆ ಹೋಗಿರುವುದಕ್ಕೆ ದೇವರು ಭಗವಂತನಾಗಿ (ಕೃಷ್ಣನಾಗಿ) ಬಂದು ಎರಡನೆ ಬಾರಿ ತನ್ನ ಧರ್ಮಗಳನ್ನು ತಿಳಿಸಿ ಹೋಗಿದ್ದಾನೆ. ಹಾಗೆ ತಿಳಿಸಿದ ಧರ್ಮಗಳು

ಜ್ಞಾನ ರೂಪವಾಗಿ ಅರ್ಥವಾಗುವುದಕ್ಕೆ ಮೊದಲಿನ ಹಾಗೆ ಸುಮಾರು ಎಂಟು ಸಾವಿರ ವರ್ಷಗಳು ಬೇಕಾಗುತ್ತವೆ. ಇದರ ಪ್ರಕಾರ ಭಗವದ್ಗೀತೆಯನ್ನು ಹೇಳಿ ಐದು ಸಾವಿರ ವರ್ಷಗಳಾದರೂ ಭಗವದ್ಗೀತೆಯಲ್ಲಿ ಎಷ್ಟೋ ಅರ್ಥವಾಗದ ಜ್ಞಾನವಿದೆ. ಭಗವದ್ಗೀತೆ ಹಿಂದೂಗಳ ಸ್ವಾಮಿಗಳೆಲ್ಲರಿಗೂ ಅರ್ಥವಾದಂತೆ ಇದ್ದರೂ ಅದರಲ್ಲಿ ಸ್ವಲ್ಪ ಹೊರತು ಎಲ್ಲಾ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಹೇಗೆ ಅರ್ಥವಾಗಲಿಲ್ಲವೋ ನಮೂನೆಯಾಗಿ ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ ಅಧ್ಯಾಯದಲ್ಲಿ 16ನೇ ಶ್ಲೋಕವನ್ನು ಕುರಿತು ಹೇಳಿದ್ದೇವಲ್ಲವೆ!

ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವನ್ನು ಎರಡನೆ ಬಾರಿ ಹೇಳಿ ಐದು ಸಾವಿರ ವರ್ಷಗಳಾದರೂ ಭಗವದ್ಗೀತೆ ಜ್ಞಾನ ಇಂದಿಗೂ ಹಿಂದೂಗಳಿಗೆ ಅರ್ಥವಾಗಲಿಲ್ಲ. ಕೇವಲ 1400 ವರ್ಷಗಳ ಸಮಯದಲ್ಲಿ ಹೇಳಿದ ಅಂತಿಮ ದೈವ ಗ್ರಂಥವೊಂದರ ಜ್ಞಾನ ಅಷ್ಟು ಬೇಗನೇ ಹೇಗೆ ಅರ್ಥವಾಗಬಲ್ಲದು? ಭಗವದ್ಗೀತೆಯನ್ನು ಸ್ವಾಮೀಜಿಗಳೆಲ್ಲರೂ ಓದುತ್ತಿದ್ದಾರೆ, ಬೋಧನೆಗಳ ರೂಪದಲ್ಲಿ ಬೋಧಿಸುತ್ತಿದ್ದಾರೆ. ಭಗವದ್ಗೀತೆಯೆಲ್ಲಾ ನಮಗೆ ತಿಳಿದಿದೆ! ಎಂದು ಅಂದುಕೊಳ್ಳುತ್ತಿದ್ದಾರೆ. ಆದರೂ ಅವರಿಗೆ ತಿಳಿಯದಂತೆ ಇರುವುದು ಎಷ್ಟೋ ಇದೆ. ಭಗವದ್ಗೀತೆಯಲ್ಲಿ ಬಹಳ ಭಾಗ ತಿಳಿಯದೆಂದರೆ ಯಾವ ಸ್ವಾಮೀಜಿಗಳು ಒಪ್ಪಿಕೊಳ್ಳುವುದಿಲ್ಲ. ಹಾಗೆಯೇ ಖುರಾನ್ ಗ್ರಂಥದಲ್ಲಿನ ಆಯತ್‌ಗಳು ಸಂಪೂರ್ಣವಾಗಿ ಅರ್ಥವಾಗುವುದಕ್ಕೆ ಇನ್ನೂ ಆರು ಅಥವಾ ಏಳು ಸಾವಿರ ವರ್ಷಗಳು ಹಿಡಿಯುತ್ತದೆ. ಐದು ಸಾವಿರ ವರ್ಷಗಳ ಪೂರ್ವದಲ್ಲಿ ಹೇಳಿದ ಭಗವದ್ಗೀತೆ ಸಂಪೂರ್ಣವಾಗಿ ಅರ್ಥವಾಗುವುದಕ್ಕೆ ಇನ್ನೂ ಸುಮಾರು ಮೂರು ಸಾವಿರ ವರ್ಷಗಳು ಹಿಡಿಯಬಹುದು. ಆ ಲೆಕ್ಕದ ಪ್ರಕಾರ 1400 ವರ್ಷಗಳ ಕೆಳಗೆ ಹೇಳಿದ ಖುರಾನ್ ಗ್ರಂಥದಲ್ಲಿನ ಜ್ಞಾನ ಸಂಪೂರ್ಣವಾಗಿ ಅರ್ಥ ವಾಗುವುದಕ್ಕೆ ಕನಿಷ್ಟ ಆರು ಅಥವಾ ಏಳು ಸಾವಿರ ವರ್ಷಗಳು ಹಿಡಿಯಬಹುದು. ಆದರೇ ಖುರಾನ್‌ನ್ನು ಬೋಧನೆಯಾಗಿ ಹೇಳುವ ಗುರುಗಳು, ಮತ ಹಿರಿಯರು ನಮಗೆ ಖುರಾನ್‌ನಲ್ಲಿ ತಿಳಿಯದಿರುವುದು ಇಲ್ಲ ಎಂದು ವಾದಿಸಬಲ್ಲರು. ವಾಖ್ಯದಲ್ಲಿರುವುದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಾರದೆ ಹೋದರೂ,

ನಮಗೆ ಎಲ್ಲಾ ಅರ್ಥವಾಗಿದೆಯೆಂದೇ ಹೇಳುತ್ತಿರುವರು. ಹಾಗೆ ಮಾತನಾಡುವ ಅವರ ನಂಬಿಕೆ ಕೆಟ್ಟುಹೋಗುವಂತೆ 'ನಿಮಗೆ ತಿಳಿದಿಲ್ಲ' ಎಂದು ಹೇಳಬಾರದು. ಏಕೆಂದರೇ! ಆತನ ಉದ್ದೇಶದಲ್ಲಿ ಗ್ರಂಥದಲ್ಲಿ ಅರ್ಥವಾದ ವಿಧಾನವೇ ಸರಿಯಾಗಿರುವುದೆಂದು ಪೂರ್ತಿ ನಂಬಿರುವುದರಿಂದ ಯಾರು ಏನು ಹೇಳಿದರೂ ಹಿಂತಿರುಗಿ ನೋಡಿಕೊಳ್ಳುವುದಿಲ್ಲ. ಆಗ ಅಂತಹವನನ್ನು ನೀನು ತಿಳಿದವನೇ ಎಂದು ನಾವು ಕೂಡಾ ಒಪ್ಪಿಕೊಂಡು, ಆತನಿಗೆ ತಿಳಿಯದಿರುವುದು ನಮಗೆ ತಿಳಿಯುತ್ತಿರುವ ಜ್ಞಾನವನ್ನು ಕುರಿತು ನಮಗೆ ತಿಳಿಯದಂತೆ ನಟಿಸುತ್ತಾ, ಹೇತುಬದ್ಧವಾಗಿ ಅದನ್ನು ಕುರಿತು ಪ್ರಶ್ನೆಗಳನ್ನು ಕೇಳಬೇಕು. ಆಗ ಪ್ರಶ್ನೆಗಳಿಗೆ ಉತ್ತರ ಆತನು ಹೇಳಿದರೂ ಅವು ಸಕ್ರಮವಾಗಿ ಇಲ್ಲವೆಂದು ಆತನಿಗೂ ಸಹ ತಿಳಿದುಹೋಗುತ್ತದೆ. ನಾವು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರ ಇಲ್ಲದೆ ಹೇಳುವುದಕ್ಕೆ ಸಂಶಯಪಟ್ಟಾಗ ಆತನಿಗೆ ತಿಳಿದಿರುವುದರ ಮೇಲೆ ಆತನಿಗೇ ಅನುಮಾನ ಬರುತ್ತದೆ. ಆಗ ಆತನು ನನಗೆ ತಿಳಿದಿರುವುದು ಸರಿಯಾದ ಜ್ಞಾನವಲ್ಲವೆಂದು ಆತನಿಗೇ ತಿಳಿದುಹೋಗುತ್ತದೆ. ಆ ವಿಧವಾಗಿ ಆದರೆ ತಿಳಿಯದಿರುವುದನ್ನು ತಿಳಿದಿಲ್ಲವೆಂದು ಒಪ್ಪಿಕೊಳ್ಳುತ್ತಾನೆ ಆದರೆ ಬೇರೆ ವಿಧವಾಗಿ ಹೇಗೆ ಹೇಳಿದರೂ, ಯಾರೂ ಒಪ್ಪಿಕೊಳ್ಳದೇ ನನಗೆ ತಿಳಿದಿರುವುದೇ ಸರಿಯಾದ ಜ್ಞಾನವೆಂದು ಅಂದುಕೊಳ್ಳುತ್ತಿರುವರು. ಯಾವು ಏನಾದರೂ ಒಂದು ಬಾರಿ ಯಾರಿಗೂ ದೇವರ ಜ್ಞಾನ ಅರ್ಥವಾಗುವುದಿಲ್ಲ. ದೇವರು ತನ್ನ ಜ್ಞಾನವನ್ನು ಗ್ರಂಥರೂಪವಾಗಿ ಕೊಟ್ಟರೇ, ಅದು ಎಲ್ಲ ವಿಧಗಳಲ್ಲಿ ಧರ್ಮಯುಕ್ತವಾಗಿ ತಿಳಿಯುವುದಕ್ಕೆ, ಅಂದರೆ ಅದರಲ್ಲಿನ ಧರ್ಮಗಳನ್ನು ಮನುಷ್ಯ ಸಂಪೂರ್ಣವಾಗಿ ಗ್ರಹಿಸಿಕೊಳ್ಳುವುದಕ್ಕೆ, ಕೆಲವು ಸಾವಿರ ವರ್ಷಗಳು ಹಿಡಿಸುತ್ತದೆಂದು ಚರಿತ್ರೆಯನ್ನನು ಸರಿಸಿ ತಿಳಿದುಹೋಗಿದೆ. ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನ ಅತ್ತ ಇತ್ತ ನಡೆದು ದೇವರು ಹೇಳಿರುವುದು ಹೇಳಿದಂತೆ ಮನುಷ್ಯನಿಗೆ ತಿಳಿಯುವುದಕ್ಕೆ ಸುಮಾರು ಎಂಟು ಸಾವಿರ ವರ್ಷಗಳು ಹಿಡಿದ ಕಾರಣದಿಂದ ಎರಡನೆಬಾರಿ ದೇವರು ತನ್ನ ಜ್ಞಾನವನ್ನು ಗ್ರಂಥರೂಪಮಾಡಿ ಕೊಟ್ಟಿದ್ದಾನೆ. ಹಾಗೆ ಕೊಟ್ಟಿರುವ ಜ್ಞಾನ ಮೂರು ಗ್ರಂಥಗಳ ರೂಪದಲ್ಲಿ ಈದಿನ ನಮ್ಮ ಮುಂದೆ ಇದೆ.

**23) ಪ್ರ :– ದೇವರ ಜ್ಞಾನ ಅರ್ಥವಾಗುವುದಕ್ಕೆ ಅಷ್ಟು ಸಮಯ ಹಿಡಿಸುತ್ತದಾ? ಅದು ನಿಜವೇನಾ?**

**ಉತ್ತರ :–** ಕುಣಿಯಲ್ಲಿ ಬಿದ್ದವನಾಗಲಿ, ಬಾವಿಯಲ್ಲಿ ಬಿದ್ದವನಾಗಲಿ ಅದರಿಂದ ಹೊರಬೀಳುವುದಕ್ಕೆ ಸ್ವಲ್ಪ ಕಾಲವೇ ಹಿಡಿಯುತ್ತದೆ. ಕರೆಯ ಮಧ್ಯದಲ್ಲಿ ಬಿದ್ದವನು ಅದನ್ನು ಈಜುತ್ತಾ ಹೊರಗೆ ಬರುವುದಕ್ಕೆ ಬಾವಿಯಿಂದ ಬಂದಿರುವುದಕ್ಕಿಂತ ಹೆಚ್ಚಿನ ಸಮಯ ಹಿಡಿಸುತ್ತದೆ. ಹಾಗೆಯೇ ಸಮುದ್ರದಲ್ಲಿ ಬಿದ್ದವನು ಹೊರ ಬೀಳಬೇಕೆಂದರೇ ತಿಂಗಳು, ವರ್ಷಗಳು ಹಿಡಿಯಬಹುದು. ಈ ವಿಧವಾಗಿ ಹೇಳಿದರೇ ದೇವರ ಜ್ಞಾನ ಸಮುದ್ರವಂತಹದ್ದು. ಈಜಿದಂತೆಲ್ಲಾ ಸಮುದ್ರವಿದ್ದಂತೆ, ತಿಳಿದುಕೊಂಡಂತೆಲ್ಲಾ ಜ್ಞಾನವಿರುತ್ತದೆ. ದೇವರ ಜ್ಞಾನ ಪ್ರಪಂಚ ಜ್ಞಾನವಂತಹದ್ದಲ್ಲ. ಪ್ರಪಂಚ ಜ್ಞಾನವೆಲ್ಲಾ ಪ್ರತ್ಯಕ್ಷವಾಗಿ ಇರುತ್ತದೆ. ಎಷ್ಟು ದೊಡ್ಡ ಜ್ಞಾನವನ್ನಾದರೂ ಬೇಗನೇ ತಿಳಿಯಬಹುದು. ಆದರೇ ಪರಮಾತ್ಮ ಜ್ಞಾನ ಸ್ಥೂಲವಾಗಿ ಇರದೇ ಬಹಳ ಭಾಗ ಸೂಕ್ಷ್ಮವಾಗಿ ಇರುತ್ತದೆ. ಆದ್ದರಿಂದ ದೇವರ ಜ್ಞಾನ ಬೇಗನೇ ಯಾರಿಗೂ ಅರ್ಥವಾಗುವುದಿಲ್ಲ. ಆದ್ದರಿಂದ ಪೂರ್ವದಲ್ಲಿ ಕೆಲವು ಸಾವಿರ ವರ್ಷಗಳು ಹಿಡಿದಿದೆ. ಅದೇ ಪದ್ಧತಿ ಪ್ರಕಾರ ದೇವರು ಯಾವಾಗ ತಿಳಿಸಿದರೂ ಅದು ಮನುಷ್ಯರಿಗೆ ಪೂರ್ತಿಯಾಗಿ ಅರ್ಥವಾಗುವುದಕ್ಕೆ ಪೂರ್ವದ ಹಾಗೆ ಅಷ್ಟೇ ಕಾಲ ಹಿಡಿಯಬಹುದೆಂದು ಹೇಳುತ್ತಿದ್ದೇವೆ.

**24) ಪ್ರ :– ದೇವರ ಜ್ಞಾನ ಇಷ್ಟು ಭಾಗ ಸ್ಥೂಲವಾಗಿ ಇದೆಯೆಂದು, ಇಷ್ಟು ಭಾಗ ಸೂಕ್ಷ್ಮವಾಗಿ ಇದೆಯೆಂದು ಸ್ವಲ್ಪದ ಮಟ್ಟಿಗೆ ಹೇಳಬಹುದಾ? ಹಾಗೆ ಹೇಳುವುದಕ್ಕೆ ಆಧಾರವೇನಾದರೂ ಇದೆಯಾ?**

**ಉತ್ತರ :–** ಇಷ್ಟೇ ಸ್ಥೂಲ, ಇಷ್ಟೇ ಸೂಕ್ಷ್ಮವೆಂದು ಹೇಳುವುದಕ್ಕೆ ಆಧಾರವಿದೆ. ಮೊದಲೇ ಇದು ಜ್ಞಾನ ವಿಷಯ. ಆಧಾರವಿಲ್ಲದಂತೆ ಯಾರೂ ಮಾತನಾಡಬಾರದು. ದೇವರು ಸೃಷ್ಟಿಸಿದ ಮಾನವನು ಹತ್ತು ಭಾಗಗಳು ಸ್ಥೂಲವಾಗಿ ಹದಿನೈದು ಭಾಗಗಳು ಸೂಕ್ಷ್ಮವಾಗಿ ಇದ್ದಾನೆ. ಶರೀರದಲ್ಲಿ ಕಡಿಮೆ ಪ್ರಾಧಾನ್ಯತೆ ಇರುವ ಹತ್ತು ಭಾಗಗಳಾದ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು

ಮಾತ್ರ ಸ್ಥೂಲವಾಗಿ ಇವೆ. ಉಳಿದ ಹೆಚ್ಚಿನ ಪ್ರಾಧಾನ್ಯತೆ ಇರುವ ಹದಿನೈದು ಭಾಗಗಳು ಕಾಣಿಸದ ಸೂಕ್ಷ್ಮವಾಗಿ ಇವೆ. ಒಟ್ಟು ಮಾನವ ದೇಹ 25 ಭಾಗಗಳಿರುವಾಗ, ಹತ್ತು ಸ್ಥೂಲವಾದಾಗ ಹದಿನೈದು ಸೂಕ್ಷ್ಮವಾಗಿ ಇರುವಂತೆ ತಿಳಿಯುತ್ತಿದೆ. ಮನುಷ್ಯನ ಶರೀರದಲ್ಲೇ ದೇವರು ಹೇಳಿದ ಜ್ಞಾನವೆಲ್ಲವೂ ಒಳಗೊಂಡಿದೆಯೆಂದು ತಿಳಿಯುವುದರಿಂದ ಮನುಷ್ಯನ ಶರೀರಕ್ಕೂ, ದೇವರು ಹೇಳಿದ ಜ್ಞಾನಕ್ಕೂ ಅವಿನಾಭಾವ ಸಂಬಂಧವಿದೆಯೆಂದು ತಿಳಿಯುತ್ತಿದೆ. ಮನುಷ್ಯನ ಶರೀರವನ್ನು ಅನುಸರಿಸಿ ದೇವರ ಜ್ಞಾನವನ್ನು ಇಷ್ಟೇ ಸ್ಥೂಲ, ಇಷ್ಟೇ ಸೂಕ್ಷ್ಮ ಎಂದು ಹೇಳಬಹುದು. ಅದರ ಪ್ರಕಾರ ಮನುಷ್ಯನ ಶರೀರದಲ್ಲಿ ಸ್ಥೂಲ ಹತ್ತು ಭಾಗಗಳು ಇದ್ದಂತೆ, ದೇವರ ಜ್ಞಾನವೂ ಸಹ ಹತ್ತರಷ್ಟು ಸ್ಥೂಲವಾಗಿ ಇದೆ. ಹಾಗೆಯೇ ಮನುಷ್ಯನ ಶರೀರ ಹದಿನೈದು ಭಾಗಗಳು ಸೂಕ್ಷ್ಮವಾಗಿ ಇದ್ದಂತೆ ದೈವ ಜ್ಞಾನವೂ ಸಹ ಹದಿನೈದು ಭಾಗಗಳು ಸೂಕ್ಷ್ಮವಾಗಿ ಇದೆಯೆಂದು ಹೇಳಬಹುದು. ಮನುಷ್ಯನ ಶರೀರವನ್ನು 25 ಭಾಗಗಾಳಾಗಿ ವಿಭಜಿಸಿದಂತೆ ದೈವಜ್ಞಾನವನ್ನು ಸಹ 25 ಭಾಗಗಾಳಾಗಿ ಹೇಳಿದರೆ ಎರಡು ಪಟ್ಟು ಸ್ಥೂಲ, ಮೂರು ಪಟ್ಟು ಸೂಕ್ಷ್ಮ ಇದೆಯೆಂದು ತಿಳಿಯುತ್ತಿದೆ.

**25) ಪ್ರ :– ದೇವರ ಜ್ಞಾನ ಪ್ರಸ್ತುತ ಕಾಲದಲ್ಲಿ ಮೂರು ಮತಗಳಾಗಿ ಇದೆಯಲ್ಲವೆ! ಮೂರು ಗ್ರಂಥಗಳಾಗಿ ದೇವರ ಜ್ಞಾನ ಇದೆ. ಉಳಿದ ಎರಡು ಗ್ರಂಥಗಳಲ್ಲಿನ ಜ್ಞಾನವು ಸಹ ಭಗವದ್ಗೀತೆಯಲ್ಲಿನ ಹಾಗೆ ಸ್ಥೂಲವಾಗಿ, ಸೂಕ್ಷ್ಮವಾಗಿ ಇದೆಯೆನ್ನುತ್ತೀರಾ?**

**ಉತ್ತರ :–** ದೇವರು ತನ್ನ ಜ್ಞಾನವನ್ನು ಮತಗಾಳಾಗಿ ವಿಭಜಿಸಿ ಹೇಳಲಿಲ್ಲ. ದೇವರು ಹೇಳಿದ ಜ್ಞಾನವನ್ನು ಮನುಷ್ಯರು ಮತಗಾಳಾಗಿ ವಿಭಜಿಸಿಕೊಂಡಿದ್ದಾರೆ. ಯಾರು ಹೇಗೆ ಅಂದುಕೊಂಡರೂ ದೇವರು ಹೇಳಿದ ಜ್ಞಾನವೆಲ್ಲವೂ ಒಂದೇ. ದೇವರು ಮೂರು ಕಾಲಗಳಲ್ಲಿ, ಮೂರು ದೇಶಗಳಲ್ಲಿ ಹೇಳಿದ ಜ್ಞಾನ ಒಂದೇ ದೇವರ ಜ್ಞಾನವಾದದ್ದರಿಂದ ಒಂದೇ ಧರ್ಮಗಳೊಂದಿಗೆ ಕೂಡಿಕೊಂಡಿರುತ್ತದೆ. ಆದ್ದರಿಂದ ಭಗವದ್ಗೀತೆಯಲ್ಲಿ ಇದ್ದಂತೆ ಉಳಿದ ಎರಡು ಗ್ರಂಥಗಳಲ್ಲಿಯೂ ಸಹ ಅದೇ ನಿಷ್ಪತ್ತಿಯಿಂದ ಸ್ಥೂಲ, ಸೂಕ್ಷ್ಮ ಜ್ಞಾನಗಳಿವೆಯೆಂದು ಹೇಳಬಹುದು.

ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 3, ಆಯತ್ 7ರಲ್ಲಿ ಈ ವಿಧವಾಗಿ ಇದೆ **(3–7) "ನಿನ್ನ ಮೇಲೆ ಈ ಗ್ರಂಥವನ್ನು ಅವತರಿಸುವಂತೆ ಮಾಡಿದವನು ದೇವರೇ. ಇದರಲ್ಲಿ ಸುಸ್ಪಷ್ಟವಾದ ಸ್ಥೂಲವಾಕ್ಯಗಳು ಮುಹ್ಕಮಾತ್ ವಿಷಯಗಳು ಇವೆ. ಅವು ಗ್ರಂಥಗಳಿಗೆ ಮೂಲ. ಇನ್ನೂ ಕೆಲವು ಬಹುವಿಧ ಭಾವನೆಗಳೊಂದಿಗೆ ಕೂಡಿಕೊಂಡ ಸೂಕ್ಷ್ಮ ವಿಷಯಗಳು ಸಹ ಇವೆ. ಅವುಗಳನ್ನು ಮುತಷಾಬಿಹಾತ್ ವಾಕ್ಯಗಳೆಂದು ಕರೆಯುತ್ತಾರೆ"** ಎಂದು ಇದೆ. ಈ ವಾಕ್ಯದ ಪ್ರಕಾರ ಭಗವದ್ಗೀತೆಯಲ್ಲಿ ಇರುವಂತೆ ಸ್ಥೂಲ, ಸೂಕ್ಷ್ಮ ವಾಕ್ಯಗಳು ಖುರಾನ್‌ನಲ್ಲಿ ಸಹ ಇವೆಯೆಂದು ತಿಳಿದುಹೋಗಿದೆ. ಅದೇ ವಿಧವಾಗಿ ಬೈಬಲ್ ಗ್ರಂಥದಲ್ಲಿ ಸಹ ಸ್ಥೂಲ, ಸೂಕ್ಷ್ಮ ಜ್ಞಾನವಿದೆ.

**26) ಪ್ರ :– ಹಿಂದೂ ಮತದಲ್ಲಿ ಎರಡನೆ ಬಾರಿ ದೇವರು ತನ್ನ ಜ್ಞಾನವನ್ನು ದ್ವಾಪರಯುಗದ ಕೊನೆಯಲ್ಲಿ ಹೇಳಿದಂತೆ ಇದೆ. ಹಾಗೆ ಹೇಳಿ ಇಲ್ಲಿಗೆ ಐದು ಸಾವಿರ ವರ್ಷಗಳಾಗಿವೆ. ಆದರೂ ಭಗವದ್ಗೀತಾ ಜ್ಞಾನ ಪೂರ್ತಿ ಧರ್ಮಬದ್ಧವಾಗಿ ಅರ್ಥವಾಗುವುದಕ್ಕೆ ಇನ್ನೂ ಮೂರು ಸಾವಿರ ವರ್ಷಗಳು ಹಿಡಿಯಬಹುದೆಂದು ಹೇಳುತ್ತಿದ್ದಾರೆ. ಗೀತಾ ಜ್ಞಾನ ಅರ್ಥವಾಗಲಿಲ್ಲ ಎನ್ನುವುದಕ್ಕೆ ಗುರುತಾಗಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳನ್ನು ತೋರಿಸಿದ್ದಾರೆ. ಐದು ಸಾವಿರ ವರ್ಷಗಳಾದರೂ ಅದರಲ್ಲಿನ ಭಾವನೆ ಅರ್ಥವಾಗಲಿಲ್ಲವೆಂದು ತಿಳಿಯುತ್ತಿದೆ. ಅಂತಿಮ ದೈವ ಗ್ರಂಥವನ್ನು ಹೇಳಿ 1400 ವರ್ಷಗಾಳಾಗಿದೆ. ನಿಮ್ಮ ಲೆಕ್ಕ ಪ್ರಕಾರವಾದರೇ ಖುರಾನ್‌ನಲ್ಲಿನ ಜ್ಞಾನ ಪೂರ್ತಿ ಪ್ರಜೆಗಳ ಮಧ್ಯದಲ್ಲಿ ಬರುವುದಕ್ಕೆ ಅದು ಧರ್ಮಯುಕ್ತವಾಗಿ ಮುಸ್ಲಿಮ್‌ರೆಲ್ಲರಿಗೂ ತಿಳಿಯುವುದಕ್ಕೆ ಇನ್ನೂ ಆರು ಸಾವಿರ ವರ್ಷಗಳು ಹಿಡಿಯಬಹುದೆಂದು ತಿಳಿಯುತ್ತಿದೆ. ಆದರೇ ಇಲ್ಲಿಗೇ ಬಹಳ ಜನ ಮತ ಹಿರಿಯರು, ಎಷ್ಟೋ ಅಲ್ಲಾಹ್ ಭಕ್ತರು ಖುರಾನ್‌ನ್ನು ಓದಿ ಚೆನ್ನಾಗಿ ಜೀರ್ಣಿಸಿಕೊಂಡವರು ಇದ್ದಾರೆ. ಅವರಿಗೆ ತಿಳಿದ ಪ್ರಕಾರ ಗ್ರಂಥದಲ್ಲಿ ದೇವರು ಹೇಳಿರುವುದು ನಾವು ಪೂರ್ತಿಯಾಗಿ ತಿಳಿದುಕೊಂಡಿದ್ದೇವೆ ಎನ್ನುವ ಭಾವನೆಯಲ್ಲಿ ಇದ್ದಾರೆ. ಯಾರ ನಂಬಿಕೆ ಅವರಿಗೆ ಇರಬಹುದು. ಅದರ ಪ್ರಕಾರ ನಾವು ಸಂಪೂರ್ಣ ಜ್ಞಾನಿಗಳೆಂದು ಅವರು ಪ್ರಕಟಿಸಿಕೊಳ್ಳಬಹುದು. ಅದರಲ್ಲಿ**

**ಯಾರ ಅಭ್ಯಂತರವೂ ಇಲ್ಲ. ಆದರೇ ಗತದಲ್ಲಿ ನಡೆದಂತೆ ವಿಧಾನವನ್ನನುಸರಿಸಿ ದೇವರ ಜ್ಞಾನ ಸುಲಭವಾಗಿ ತಿಳಿಯುವುದು ಅಲ್ಲ ಎಂದು ತಿಳಿದುಹೋಗುತ್ತಿದೆ. ದ್ವಾಪರ ಯುಗದಲ್ಲಿ ಹೇಳಿದ ಜ್ಞಾನ ಕಲಿಯುಗದಲ್ಲಿ ಐದು ಸಾವಿರ ವರ್ಷಗಳು ಕಳೆದರೂ ಸರಿಯಾಗಿ ತಿಳಿಯದಿರುವಾಗ, ಕಲಿಯುಗದಲ್ಲಿ 1400 ವರ್ಷಗಳ ಕೆಳಗೆ ತಿಳಿದ ಜ್ಞಾನವೂ ಸಹ ಮನುಷ್ಯರಿಗೆ ತಿಳಿದಿಲ್ಲವೆನ್ನುವುದಕ್ಕೆ ಗುರುತಾಗಿ ನೀವು ಭಗವದ್ಗೀತೆಯಲ್ಲಿ ಒಂದು ಶ್ಲೋಕವನ್ನು ತೋರಿಸಿದಂತೆ ಖುರಾನ್ ಗ್ರಂಥದಲ್ಲಿ ಸಹ ತೋರಿಸಬಹುದಲ್ಲವೆ! ಅಂತಹ ವಾಕ್ಯವನ್ನು ನಮೂನೆಯಾಗಿ ಒಂದು ವಾಕ್ಯವನ್ನು (ಒಂದು ಆಯತ್‌ನ್ನು) ತೋರಿಸೆಂದು ಕೋರುತ್ತಿದ್ದೇವೆ.**

**ಉತ್ತರ :–** ಐದು ಸಾವಿರ ವರ್ಷಗಳು ಕಳೆದರೂ ಭಗವದ್ಗೀತೆ ಅರ್ಥ ವಾಗಲಿಲ್ಲವೆಂದು ನಿರೂಪಿಸುವುದಕ್ಕೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16ನೇ ಶ್ಲೋಕವನ್ನು ಮಾತ್ರ ತೋರಿಸಿದ್ದೇವೆ. ಹಿಂದೂಗಳಲ್ಲಿ ಎಷ್ಟೋ ಉದ್ಧಂಡ ಪಂಡಿತರು, ದೊಡ್ಡ ಸ್ವಾಮೀಜಿಗಳು ಇದ್ದಾರೆ. ಅವರೆಲ್ಲರೂ ಭಗವದ್ಗೀತೆಯಲ್ಲಿ ಜ್ಞಾನವೆಲ್ಲವೂ ಸಂಪೂರ್ಣವಾಗಿ ತಿಳಿದಿದ್ದೇವೆನ್ನುವ ಭಾವನೆಯಲ್ಲಿ ಇದ್ದಾರೆ. ಆದರೂ ಅವರ ಭಾವನೆಗೆ ವಿರುದ್ಧವಾಗಿ ಮನುಷ್ಯರು ಇನ್ನೂ ತಿಳಿಯಬೇಕಾದ ಧರ್ಮಗಳನ್ನು ತಿಳಿದುಕೊಂಡಿಲ್ಲವೆಂದು ತಿಳಿಸುವುದಕ್ಕೆ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿನ ಶ್ಲೋಕವನ್ನು ತೋರಿಸಿದ್ದೇವೆ. ಹಾಗೆ ಹೇಳುವುದರಿಂದ ದೇವರ ಜ್ಞಾನವೊಂದರ ಹಿರಿಮೆಯನ್ನು, ನಿಜಸ್ಥಿತಿಯನ್ನು ತಿಳಿಸುವುದೇ ನಮ್ಮ ಉದ್ದೇಶ ಆದರೆ, ಇತರರನ್ನು ಹೀಯಾಳಿಸಿ ನೀವು ಜ್ಞಾನಿಗಳಲ್ಲ ಎಂದು ಹೇಳುವುದು ನಮ್ಮ ಉದ್ದೇಶವಲ್ಲವೆಂದು ತಿಳಿಸುತ್ತಿದ್ದೇವೆ. ನಮ್ಮಲ್ಲಿ ಯಾವ ಭಾವನೆಯಾದರೂ ಇರಬಹುದು. ನಮ್ಮಲ್ಲಿ ಇರುವ ಭಾವನೆಗಳೆಲ್ಲವೂ ಸರಿಯಾದವೇ ಎಂದು ನಾವು ಅಂದುಕೊಳ್ಳಬಹುದು. ಅದರಲ್ಲಿ ಯಾರ ಅಭ್ಯಂತರವೂ ಇಲ್ಲ. ಆದರೆ ನಮಗಿರುವ ಭಾವನೆಯೊಂದಿಗೆ ದೇವರ ಭಾವನೆಯನ್ನು ಹೋಲಿಸಿ ನೋಡಿಕೊಳ್ಳುವುದರಲ್ಲಿ ತಪ್ಪಿಲ್ಲ ಅಲ್ಲವೆ! ಹಾಗೆಯೇ ಈ ದಿನ ಮುಸ್ಲಿಮ್‌ರಲ್ಲಿ ಸಹ ಎಷ್ಟೋ ಜ್ಞಾನಿಗಳಾಗಿ ಇರುವವರು ಇದ್ದಾರೆ. ಆದರೇ ಅವರ ಭಾವನೆ ಅವರ ಬಗ್ಗೆ ಸರಿಯಾಗಿರುವುದೇ ಆಗಬಹುದು.

ಅಷ್ಟಕ್ಕೇ ನಿಲ್ಲದೆ ದೇವರ ಭಾವನೆಯೊಂದಿಗೆ, ದೇವರ ಧರ್ಮದೊಂದಿಗೆ ಹೋಲಿಸಿ ನೋಡಿಕೊಳ್ಳುವುದರಲ್ಲಿ ತಪ್ಪಿಲ್ಲ. ಒಂದು ವೇಳೆ ದೇವರ ಭಾವನೆಯಲ್ಲಿ ಮನುಷ್ಯರ ಭಾವನೆ ಬೇರೆಯಾಗಿ ಇರುವಾಗ ಅವುಗಳನ್ನು ಸರಿಪಡಿಸಿಕೊಂಡು ದೇವರ ಭಾವನೆಯನ್ನು ಹೊಂದುವುದಕ್ಕೆ ಅವಕಾಶವಿದೆಯಲ್ಲವೆ! ದೇವರ ಭಾವನೆ ಯೊಂದಿಗೆ ನಮ್ಮ ಭಾವನೆಯನ್ನು ಹೋಲಿಸಿ ನೋಡಿಕೊಳ್ಳದೆ ಹೋದರೇ, ಅವನ ತಪ್ಪನ್ನು ಅವನು ತಿಳಿದುಕೊಳ್ಳಲಾರನು. ಆದ್ದರಿಂದ ದೇವರ ವಾಕ್ಯವನ್ನು ತೆಗೆದುಕೊಂಡು ಒಂದಕ್ಕೆ ಎರಡು ಬಾರಿ ನೋಡಿಕೊಳ್ಳಬೇಕೆಂದು ಹೇಳುತ್ತಿದ್ದೇವೆ.

ಭಗವದ್ಗೀತೆಯನ್ನು ಹೇಳಿ ಐದು ಸಾವಿರ ವರ್ಷಗಳಾದರೂ ಅದು ಅರ್ಧ ಸಹ ಅರ್ಥವಾಗಲಿಲ್ಲ. ಹಾಗಿರುವಾಗ ಖುರಾನ್ ಗ್ರಂಥವನ್ನು ಭಗವದ್ಗೀತೆಯೊಂದಿಗೆ ಹೋಲಿಸಿ ನೋಡಿದರೇ, ಅದು ಬಂದು ಬಹಳ ಕಡಿಮೆ ಕಾಲವಾಗಿರುವುದರಿಂದ, ಖುರಾನ್‌ನಲ್ಲಿ ಬಹಳ ಭಾಗ ಅರ್ಥವಾಗಲಿಲ್ಲವೆಂದು ಹೇಳುವುದಕ್ಕೆ ಅವಕಾಶವಿದೆ. ನೀವು ಕೇಳಿರುವುದು ಸಾಕ್ಷ್ಯಕ್ಕೆ ಒಂದು ಆಯತ್‌ನ್ನು ಹೇಳೆಂದಿದ್ದೀರಲ್ಲವೆ! ನಿಮ್ಮ ಮಾತಿನ ಪ್ರಕಾರವೇ ಸೂರಾ 2, ಆಯತ್ 187 ತೆಗೆದುಕೊಂಡು ನೋಡೋಣ. **(2–187) "ಉಪವಾಸ ದಿನಗಳಲ್ಲಿ ರಾತ್ರಿ ಹೊತ್ತು ನೀವು ನಿಮ್ಮ ಪತ್ನಿಯರನ್ನು ಸೇರುವುದು ನಿಮಗಾಗಿ ಧರ್ಮ ಸಮ್ಮತ ಮಾಡಲಾಗಿದೆ. ನಿಮ್ಮ ಪತ್ನಿಯರು ನಿಮಗೆ ವಸ್ತ್ರಗಳು, ನೀವು ನಿಮ್ಮ ಪತ್ನಿಯರಿಗೆ ವಸ್ತ್ರಗಳು. ನೀವು ರಹಸ್ಯವಾಗಿ ಆತ್ಮ ದ್ರೋಹಕ್ಕೆ ಭಾಗಿಯಾಗುತ್ತಿದ್ದೀರೆನ್ನುವ ವಿಷಯ ಅಲ್ಲಾಹ್‌ಗೆ ತಿಳಿದಿದೆ. ಆದರೂ ಆತನು ಕ್ಷಮಾಗುಣದಿಂದ ನಿಮ್ಮ ಕಡೆಗೆ ಮರಳಿ ನಿಮ್ಮ ತಪ್ಪುಗಳನ್ನು ಮನ್ನಿಸಿದ್ದಾನೆ. ಇನ್ಮುಂದೆ ನೀವು ನಿಮ್ಮ ಹೆಂಡತಿಯರೊಂದಿಗೆ ಉಪವಾಸ ರಾತ್ರಿಗಳಲ್ಲಿ ರಮಿಸುವುದಕ್ಕೆ, ಅಲ್ಲಾಹ್ ನಿಮಗಾಗಿ ಬರೆದು ಇಟ್ಟಿರುವುದನ್ನು ಅನ್ವೇಷಿಸುವುದಕ್ಕೆ ನಿಮಗೆ ಅನುಮತಿ ಇದೆ. ಮುಂಜಾನೆಯಲ್ಲಿ ಬಿಳುಪು ಮಧ್ಯರಾತ್ರಿ ಕಪ್ಪು ಛಾಯೆಗಳಿಂದ ಕಾಣಿಸುವವರೆಗು ತಿನ್ನಿರಿ, ಕುಡಿಯಿರಿ. ಆ ನಂತರ ಇವುಗಳೆಲ್ಲವನ್ನು ಬಿಟ್ಟು ರಾತ್ರಿ ಕತ್ತಲಾಗುವವರೆಗು ಉಪವಾಸವಿರಿ. ಇನ್ನೂ ನೀವು ಮಸ್ಜಿದ್‌ಗಳಲ್ಲಿ "ಏತೆಕಾಫ್" ಆಚರಿಸುವ ಕಾಲದಲ್ಲಿ ನಿಮ್ಮ ಪತ್ನಿಯರೊಂದಿಗೆ ಸಮಾಗಮ ನಡೆಸಬಾರದು. ಇವು ಅಲ್ಲಾಹ್ ನಿರ್ಧಾರಿಸಿದ**

**ಹದ್ದುಗಳು ನೀವು ಅವುಗಳ ಆಸುಪಾಸಿಗೂ ಕೂಡಾ ಹೋಗಬೇಡಿ. ಪ್ರಜೆಗಳು ಅಪ್ರಮತ್ತರಾಗಿ ಇರುವುದಕ್ಕಾಗಿ ಅಲ್ಲಾಹ್ ತನ್ನ ಆಯತ್‌ಗಳನ್ನು ಹೀಗೆ ಸುಸ್ಪಷ್ಟವಾಗಿ ಹೇಳುತ್ತಿದ್ದಾನೆ."**

ಈ ವಾಕ್ಯ (ಆಯತ್) ಸೂಕ್ಷ್ಮ ಜ್ಞಾನ ಇರುವುದಲ್ಲ. ಇದು ಸ್ಥೂಲಜ್ಞಾನವು ಮಾತ್ರ. ಇದು ಮನುಷ್ಯರ ಪ್ರವರ್ತನೆಯನ್ನು ಕುರಿತು ಹೇಳುವುದು. ಈ ವಾಕ್ಯ ಒಂದು ವಿಷಯವನ್ನು ಕುರಿತು ಹೇಳುತ್ತಾ ಆರಂಭವಾಗಿದೆ. ಅದೇ ವಿಧವಾಗಿ ಅದೇ ವಿಷಯವನ್ನು ಕೊನೆಯವರೆಗು ಹೇಳಿ ಮುಗಿಸುವುದು ನಡೆದಿದೆ. ಇಲ್ಲಿ ಶರೀರ ಸಂಬಂಧ ವಿಷಯವಾದ ಸ್ತ್ರೀ ಪುರುಷ ಸಂಭೋಗ ವಿಷಯವನ್ನು ಕುರಿತು ಹೇಳುವುದಾಗಿದೆ. ಇದರಲ್ಲಿ ವಿಶೇಷ "ಸ್ತ್ರೀಯರು ಪುರುಷನಿಗೆ ವಸ್ತ್ರಗಳು, ಪುರುಷರು ಸ್ತ್ರೀಯರಿಗೆ ವಸ್ತ್ರಗಳು" ಎನ್ನುವ ಮಾತು ಇದೆ. ಇದು ಸ್ವಲ್ಪ ಅರ್ಥವಾಗದ ಮಾತಾದರೂ ಅದನ್ನು ಬಿಚ್ಚಿ ಹೇಳಿಕೊಳ್ಳಬಹುದು. ವಸ್ತ್ರಗಳು ಎಂದರೆ ಧರಿಸುವವು ಎಂದು ಅರ್ಥ. ಶರೀರಕ್ಕೆ ಧರಿಸುವವುಗಳನ್ನು ವಸ್ತ್ರಗಳು ಎನ್ನುತ್ತೇವೆ. ಸ್ತ್ರೀ ಪುರುಷನನ್ನು ಧರಿಸಬಹುದು, ಪುರುಷನು ಸ್ತ್ರೀಯನ್ನು ಧರಿಸಬಹುದು ಎಂದು ಇಲ್ಲಿ ತಿಳಿಸುವುದಾಗಿದೆ. ಇದರಲ್ಲಿ ವಿಶೇಷವೇನೆಂದರೇ 'ಒಬ್ಬ ಪುರುಷನು ತನ್ನ ಸ್ತ್ರೀ ಹತ್ತಿರಕ್ಕೆ (ಪತ್ನಿಯ ಹತ್ತಿರಕ್ಕೆ) ತನ್ನ ಇಚ್ಛೆಯಿಂದ ಹೇಗೆ ಹೋಗುತ್ತಿದ್ದಾನೋ, ಹಾಗೆಯೇ ಒಬ್ಬ ಸ್ತ್ರೀ ತನ್ನ ಪುರುಷನ ಹತ್ತಿರಕ್ಕೆ (ಪತಿಯ ಹತ್ತಿರಕ್ಕೆ) ತನ್ನ ಇಚ್ಛೆ ಉಂಟಾದಾಗ ಹೋಗಬಹುದು' ಎಂದು ಹೇಳುವುದೇ ಇದರಲ್ಲಿ ವಿಶೇಷತೆ. ಇದನ್ನನುಸರಿಸಿ ಸ್ತ್ರೀ ಪುರುಷನ ಹತ್ತಿರಕ್ಕಾದರೂ ಹೋಗಬಹುದು, ಹಾಗೆಯೇ ಪುರುಷನು ಸ್ತ್ರೀ ಹತ್ತಿರಕ್ಕಾದರೂ ಹೋಗಬಹುದೆಂದು ತಿಳಿಯುತ್ತಿದೆ. ಸ್ತ್ರೀ, ಪುರುಷರು ಒಬ್ಬರಿಗೊಬ್ಬರು ರಮಿಸುವುದರಲ್ಲಿ (ಶಾರೀರಕವಾಗಿ ಬೆರೆಯುವುದರಲ್ಲಿ) ಸಮಾನ ಹಕ್ಕುದಾರರೆಂದು ತಿಳಿಯುತ್ತಿದೆ. ಒಬ್ಬರನ್ನೊಬ್ಬರು ವಸ್ತ್ರಗಳು ಎಂದು ಹೇಳುವುದರಲ್ಲಿ ಅಷ್ಟೇ ಅಂತರಾರ್ಥವಿದೆ. ಸ್ತ್ರೀ ಪುರುಷರ ಸಂಭೋಗ ವಿಷಯವನ್ನು ಕುರಿತು ಪವಿತ್ರ ದಿನಗಳಾದ ರಂಜಾನ್ ತಿಂಗಳಲ್ಲಿ ದೇವರು ಧರ್ಮಸಮ್ಮತವಾದ ವಿಧಾನವನ್ನು ಹೇಳಿದ್ದಾನೆ. ಆ ವಿಧಾನದ

ಪ್ರಕಾರ ಹಗಲು ಹೊತ್ತು ರಮಿಸುವುದು ಮಾಡ ಬಾರದೆಂದು ರಾತ್ರಿ ಸಮಯಗಳಲ್ಲಿ ಮಾತ್ರ ಆ ಕೆಲಸವನ್ನು ಮಾಡಿಕೊಳ್ಳಿರೆಂದು ಹೇಳುವುದಾಗಿದೆ.

ವಿವರವಾಗಿ ಅರ್ಥವಾಗುವುದಕ್ಕೆ ಹೀಗೆ ಹೇಳುತ್ತಿದ್ದೇವೆ. ಪೂರ್ವದಲ್ಲಿ ರೋಗಗಳು ಬಂದರೆ ಅದಕ್ಕೆ ಹೆಚ್ಚಾಗಿ ಆಯುರ್ವೇದ ಚಿಕಿತ್ಸೆಯ ಮೇಲೆ ಮನುಷ್ಯರು ಆಧಾರಪಡುತ್ತಿದ್ದರು. ಆಯುರ್ವೇದ ಔಷಧಗಳನ್ನು ಬಳಸಿದರೇ ತಪ್ಪದೆ ಕೆಲವು ಆಹಾರ ಪದಾರ್ಥಗಳು ತಿನ್ನಬಾರದು. ಎಲ್ಲರಿಗೂ ತಿಳಿದಂತೆ ಈ ದಿನವೂ ಸಹ ಕಾಮಾಲೆ ರೋಗಕ್ಕೆ ಯಾವ ಔಷಧಗಳು ಬಳಸಿದರೂ ಮಾಂಸ ತಿನ್ನಬಾರದು. ಕಾಮಾಲೆ ರೋಗವಿರುವಾಗ ಮಾಂಸವನ್ನು ತಿಂದರೇ ಮರಣ ತಪ್ಪುವುದಿಲ್ಲವೆನ್ನುವ ವಿಷಯ ಎಲ್ಲರಿಗೂ ತಿಳಿದಿದೆ. ಪೂರ್ವದಲ್ಲಿ ಆಯುರ್ವೇದ ಔಷಧಗಳು ಬಳಸುವಾಗ ಪತ್ಯವನ್ನು ತಪ್ಪದೆ ಹೇಳುತ್ತಿದ್ದರು. ಪತ್ಯವೆಂದರೆ ತಿನ್ನಬಾರದವು, ಬಳಸಬಾರದವು, ಮಾಡಬಾರದವು ಎಂದು ಮೂರು ವಿಧಗಳಾಗಿ ಇವೆ. ಮೂರು ವಿಧಗಳನ್ನು 'ಪತ್ಯ' ಎನ್ನುವ ಒಂದು ಪದದಿಂದ ಕರೆಯುವುದು ನಡೆಯುತ್ತಿದೆ. ಕಾಮಾಲೆಗೆ ಮಾಂಸವನ್ನು ತಿನ್ನಬಾರದು. ಜ್ವರ ಬಂದಾಗ ತಣ್ಣೀರಿನ ಸ್ನಾನ ಮಾಡಬಾರದು. ಕ್ಷಯ (ಟಿ.ಬಿ) ರೋಗ, ಗುಂಡಿಗೆ ರೋಗ ಇರುವಾಗ 'ಹಾಸಿಗೆ ಪತ್ಯ' ತಪ್ಪದೆ ಇರಬೇಕು. 'ಹಾಸಿಗೆ ಪತ್ಯ' ಎನ್ನುವ ಮಾತು ಈ ಕಾಲದಲ್ಲಿ ಹೊಸದಾಗಿ ಕಾಣಿಸಿದರೂ ಪೂರ್ವದಲ್ಲಿ ಸರ್ವ ಸಾಧಾರಣವಾಗಿ ಈ ಪದವನ್ನು ಹೇಳುತ್ತಿದ್ದರು. ಈ ಪದಕ್ಕೆ ವಿವರವು ಎಲ್ಲರಿಗೂ ತಿಳಿದಿರುತ್ತಿತ್ತು. ಹಾಸಿಗೆ ಪತ್ಯವೆಂದರೆ ಪತ್ನಿ ಪತಿಯೊಂದಿಗೆ ಸೇರಬಾರದು (ರಮಿಸಬಾರದು). ಹಾಗೆಯೇ ಪತಿ ಪತ್ನಿಯೊಂದಿಗೆ ಸೇರಬಾರದು. ಖುರಾನ್ ಗ್ರಂಥದಲ್ಲಿ ಈ ವಿಷಯವನ್ನು ಹೇಳುತ್ತಾ "ರಾತ್ರಿ ಹೊತ್ತು ತಿನ್ನಿರಿ, ಕುಡಿಯಿರಿ. ಹಗಲು ಹೊತ್ತು ಉಪವಾಸವಿರಿ" ಎಂದಿದ್ದಾರೆ. ಉಪವಾಸವೆಂದರೆ ಪತ್ಯ ಎಂದು ಅರ್ಥ. ಉಪ+ವಾಸ= ಉಪವಾಸ ಉಪ ಎಂದರೇ ಪಕ್ಕದಲ್ಲೇ ಇರುವ ನಿವಾಸ ಎಂದು ಅರ್ಥ. ಪ್ರತಿ ದಿನ ಇದ್ದಂತೆ ಅಲ್ಲದೆ ಬೇರೊಂದು ವಿಧವಾಗಿ ಇರುವುದೆಂದು ಅರ್ಥ. ಸಾಧಾರಣ ಸಮಯದಲ್ಲಿ ರಮಿಸುವವನು ರೋಗಸಮಯದಲ್ಲಿ ಉಪವಾಸ (ಪತ್ಯ) ಇರಬೇಕು. ಹಾಗೆಯೇ ಸಾಧಾರಣ

ಸಮಯದಲ್ಲಿ ತಿನ್ನುವವನು ರೋಗ ಸಮಯದಲ್ಲಿ ಉಪವಾಸ (ಪಯ್ಯ) ಇರಬೇಕು. ಸಾಧಾರಣ ಸಮಯದಲ್ಲಿ ಸ್ನಾನ ಮಾಡುವವನು ರೋಗ ಸಮಯದಲ್ಲಿ ಉಪವಾಸ (ಪತ್ಯ) ಇರಬೇಕು ಎಂದು ಹೇಳುವುದರಲ್ಲಿ ಆಗ ಯಾವುದು ಅವಶ್ಯವೋ ಅದನ್ನು ಬಿಟ್ಟುಹಾಕುವುದೆಂದು ಅರ್ಥ. ಇಲ್ಲಿ ಪವಿತ್ರ ದಿನಗಳಲ್ಲಿ ಪವಿತ್ರವೇ ಅವಶ್ಯಕ ಆದ್ದರಿಂದ ಸೂರಾ 2, ಆಯತ್ 187 ರಲ್ಲಿ ಪತಿ ಪತ್ನಿಯರು ರಮಿಸುವ ವಿಷಯವನ್ನು ಪತ್ಯವೆಂದು ಹೇಳಿದ್ದಾರೆ. ಅಲ್ಲಿ ಹೇಳಿರುವುದು ಹಾಸಿಗೆ ಪತ್ಯವಾದರೆ ಮನುಷ್ಯರು ಅರ್ಥಮಾಡಿಕೊಂಡಿರುವುದು 'ಪದಾರ್ಥ ಪತ್ಯ'. ಆಹಾರ ಪತ್ಯವನ್ನು ಕುರಿತು ಹೇಳಬೇಕಾದ ಸಂದರ್ಭವೇ ಆ ವಾಕ್ಯದಲ್ಲಿ ಇಲ್ಲ. ಆ ವಾಕ್ಯದಲ್ಲಿ ಮೊದಲಿನಲ್ಲಿಯೂ ಕೊನೆಯಲ್ಲಿಯೂ ಹಾಸಿಗೆ ಪತ್ಯವೇ ಕಾಣಿಸುತ್ತಿದೆ. ಬುದ್ಧಿ ಇರುವವರು ಚೆನ್ನಾಗಿ ಗಮನಿಸಿ ನೋಡಿದರೆ ಅಲ್ಲಿ ಆಹಾರ ಪತ್ಯವನ್ನು ಕುರಿತು ಏನೂ ಹೇಳಲಿಲ್ಲವೆಂದು ಎಲ್ಲರಿಗೂ ತಿಳಿದುಹೋಗುತ್ತದೆ. ಆದರೇ ದೇವರು ಹೇಳದ ವಿಷಯವನ್ನು ಮನುಷ್ಯರು ಅರ್ಥ ಮಾಡಿಕೊಂಡು ಎಲ್ಲರೂ ದೇವರು ಹೇಳಿದ ಭಾವನೆಯನ್ನು ಬಿಟ್ಟು ಪಕ್ಕದ ಭಾವನೆಯೊಳಗೆ ಹೋಗಿದ್ದಾರೆ. ಈ ವಿಷಯವನ್ನು ಪುನಃ ಅಲ್ಲಾಹ್ ಹೇಳಬೇಕಾಗಿರುವುದೇ ಹೊರತು ನಾವು ಹೇಳುವುದರಿಂದ ಪ್ರಯೋಜನ ಇಲ್ಲವೆಂದು ನಮಗೆ ತಿಳಿದಿದೆ! ಆದರೂ ಅಲ್ಲಾಹ್ ಪ್ರೇರಣೆಯಿಂದ ಸತ್ಯವನ್ನು ಬರೆಯಬೇಕಾಗಿಬಂದಿದೆ. ಸ್ತ್ರೀ ಪುರುಷರು ಸೇರುವ ಸಮಯ ರಾತ್ರಿಯೇ ಎಂದು ಹಗಲು ಅಲ್ಲವೆಂದು ಅದೇ ಸರಿಯಾದ ಸಮಯವೆಂದು ಸಾಧಾರಣವಾಗಿ ಎಲ್ಲರಿಗೂ ತಿಳಿದಿದೆ. ಅದೇ ವಿಷಯವನ್ನೇ ದೇವರು ಸಹ ಪವಿತ್ರ ದಿನಗಳಲ್ಲಿ ಪದ್ಧತಿಯಾಗಿ ಇರು ಎಂದು ಪದ್ಧತಿಯನ್ನು ತಪ್ಪಿ ನಡೆಯಬೇಡವೆಂದು ಹೇಳಿದ್ದಾನೆ. ಈ ವಾಕ್ಯದಲ್ಲಿ ಹೇಳಿರುವುದು ಒಂದಾದರೆ ಮನುಷ್ಯ ಅರ್ಥಮಾಡಿಕೊಂಡಿರುವುದು ಮತ್ತೊಂದಲ್ಲವೆ! ಈ ವಾಕ್ಯ ಅರ್ಥವಾಗಲಿಲ್ಲವೆಂದು, ಈ ವಿಧವಾಗಿಯೇ ಅನೇಕ ವಾಕ್ಯಗಳು ಅರ್ಥವಾಗಲಿಲ್ಲವೆಂದು ತಿಳಯುತ್ತಿದೆ. ಖುರಾನ್ ಸಂಪೂರ್ಣವಾಗಿ ದೇವರ ದಯೆಯಿಂದ ಕೆಲವು ಸಾವಿರ ವರ್ಷಗಳಿಗಾದರೂ ಅರ್ಥವಾಗಬಲ್ಲದು.

**27) ಪ್ರ :– ಈಗ ನೀವು ಹೇಳಿರುವುದು ದೇವರ ಜ್ಞಾನ ವಿಷಯವಾ, ಪ್ರಪಂಚ ಜ್ಞಾನ ವಿಷಯವಾ?**

**ಉತ್ತರ :–** ಒಂದು ವಿಧವಾಗಿ ಪ್ರಪಂಚಜ್ಞಾನ ವಿಷಯವೇ ಎಂದು ಹೇಳಬಹುದು. ಮಾನವರ ರತಿಕ್ರೀಡೆ ದೈವ ವಿಷಯವಲ್ಲ, ಪ್ರಪಂಚವಿಷಯವೇ ಆಗುತ್ತದೆ. ಖುರಾನ್ ಗ್ರಂಥದಲ್ಲಿ ಕೆಲವು ಪ್ರಪಂಚ ನೀತಿಗೆ ಸಂಬಂಧಿಸಿದ ಸ್ಥೂಲ ವಿಷಯಗಳು, ದೇವರ ಜ್ಞಾನಕ್ಕೆ ಸಂಬಂಧಿಸಿದ ಸೂಕ್ಷ್ಮವಿಷಯಗಳು ಎರಡೂ ಇವೆ. ಪ್ರಪಂಚ ನೀತಿಗೆ ಸಂಬಂಧಿಸಿದ ಸ್ಥೂಲ ವಿಷಯಗಳೊಳಗೇ 187ನೆ ಆಯತ್ ಸೇರಿಹೋಗುತ್ತದೆ. ಮನುಷ್ಯ ಜೀವನ ವಿಧಾನವನ್ನು ಕುರಿತಿರುವ ಎಷ್ಟೋ ವಿಷಯಗಳು ಖುರಾನ್ ಗ್ರಂಥದಲ್ಲಿ ಇವೆಯೆಂದು ಮುಸ್ಲಿಮ್‌ರೆಲ್ಲರಿಗೂ ತಿಳಿದಿದೆ. ದೇವರ ಜ್ಞಾನ ಮನುಷ್ಯನಿಗೆ ಎಷ್ಟು ಅವಶ್ಯಕವೋ, ಜೀವನ ವಿಧಾನವೂ ಸಹ ಅಷ್ಟೇ ಅವಶ್ಯಕವೆನ್ನುವ ಉದ್ದೇಶದಿಂದ ಪ್ರವಕ್ತರವರು ಈ ವಿಷಯಗಳನ್ನು ಹೇಳಿರಬಹುದು.

**28) ಪ್ರ :– ನಾನು ಒಬ್ಬ ಮುಸ್ಲಿಮ್ ಸ್ತ್ರೀಯನ್ನು ಪ್ರಶ್ನಿಸುತ್ತಿದ್ದೇನೆ. ದೇವರ ಜ್ಞಾನಕ್ಕು ಸ್ತ್ರೀ ಪುರುಷ ಸಂಭೋಗ ವಿಷಯಗಳಿಗು ಏನು ಸಂಬಂಧ? ಸ್ತ್ರೀ ಪುರುಷರ ಸೇರುವಿಕೆಯ ವಿಷಯ ಕೇವಲ ಪ್ರಪಂಚ ವಿಷಯವಾಗುತ್ತದಲ್ಲವೆ! ಹಾಗಿರುವಾಗ ಜಿಬ್ರಯೇಲ್ ಈ ವಿಷಯಗಳನ್ನು ಹೇಳಿರುತ್ತಾನಾ? ಖುರಾನ್‌ನಲ್ಲಿ ಕೇವಲ ಜಿಬ್ರಯೇಲ್ ಹೇಳಿದ ವಿಷಯಗಳೇ ಇವೆಯಾ? ಜಿಬ್ರಯೇಲ್ ಹೇಳಿದರೇ ದೇವರ ಜ್ಞಾನವನ್ನೇ ಹೇಳಬೇಕಲ್ಲವೆ!**

**ಉತ್ತರ :–** ಜಿಬ್ರಯೇಲ್ ಆಕಾಶದಿಂದ ಇಳಿದುಬಂದು ತನಗೆ ತಿಳಿದಿರುವ ದೇವರ ಜ್ಞಾನವನ್ನು ಪ್ರವಕ್ತರವರಿಗೆ ಹೇಳಿಹೋಗಿದ್ದಾನೆ. ಮಹಾಜ್ಞಾನಿಯಾದ ಜಿಬ್ರಯೇಲ್ ಆಕಾಶದಲ್ಲಿ 'ವಹೀ'ಯಿಂದ ತನಗೆ ತಿಳಿದಿರುವ ಜ್ಞಾನವನ್ನು ಪ್ರವಕ್ತರವರಿಗೆ ಹೇಳಿದ್ದಾನೆ. ಜಿಬ್ರಯೇಲ್ ಹೇಳಿರುವುದು ದೇವರ ಜ್ಞಾನವೇ ಹೊರತು, ಅದರಲ್ಲಿ ಪ್ರಪಂಚ ಜ್ಞಾನ ಸ್ವಲ್ಪವೂ ಇಲ್ಲ. ಜಿಬ್ರಯೇಲ್ ತನಗೆ ತಿಳಿದ ಜ್ಞಾನ ಆಗ ಸ್ವಲ್ಪ, ಆಗ ಸ್ವಲ್ಪ ಪ್ರವಕ್ತರವರಿಗೆ ಹೇಳುತ್ತಾ ಬಂದಿದ್ದಾನೆ.

ಒಂದೇ ಬಾರಿ ಜಿಬ್ರಯೇಲ್ ಜ್ಞಾನವೆಲ್ಲವನ್ನೂ ಹೇಳಲಿಲ್ಲ. 23 ವರ್ಷಗಳಿಂದ ಹೇಳುತ್ತಾ ಬಂದಿದ್ದಾನೆ. ಜಿಬ್ರಯೇಲ್ ಪ್ರಣಾಳಿಕೆಯ ಪ್ರಕಾರ 25 ವರ್ಷಗಳ ಕಾಲ ತನಗೆ ತಿಳಿದಿರುವ ಜ್ಞಾನವೆಲ್ಲವನ್ನೂ ಹೇಳಬೇಕಾಗಿರುವಾಗ 23 ವರ್ಷಗಳು ಮಾತ್ರವೇ ಹೇಳಿದ್ದಾನೆ. ಇದು ನಮ್ಮ ಅಂದಾಜಿನ ಪ್ರಕಾರ ಹೇಳುವ ಮಾತಾಗಿ ಗ್ರಹಿಸಬೇಕು. ಇನ್ನೂ ಎರಡು ವರ್ಷಗಳು ಜಿಬ್ರಯೇಲ್ ಜ್ಞಾನವನ್ನು ಹೇಳಬೇಕಾಗಿರುವಾಗ ಪ್ರವಕ್ತರವರು ಆಕಸ್ಮಿಕವಾಗಿ ರೋಗ ಬಂದು ಮರಣಿಸುವುದು ನಡೆದಿದೆ. ಆದ್ದರಿಂದ ಇನ್ನೂ ತಿಳಿಯಬೇಕಾದ ಜ್ಞಾನವಿರುವಾಗ ಪ್ರವಕ್ತರವರ ಮರಣದೊಂದಿಗೆ ನಾವು ಸ್ವಲ್ಪ ಕಳೆದುಕೊಂಡಿದ್ದೇವೆಂದೇ ಹೇಳಬಹುದು. ಪ್ರವಕ್ತರವರು ಮರಣಿಸಿದ ನಂತರ ಸ್ವಲ್ಪ ಕಾಲಕ್ಕೆ ಖುರಾನ್ ಗ್ರಂಥವನ್ನು ಬರೆಯುವುದು ನಡೆದಿದೆ. ಆದರೆ ಖುರಾನ್ ಗ್ರಂಥದಲ್ಲಿ ಜಿಬ್ರಯೇಲ್ ಹೇಳಿದ ಜ್ಞಾನ ವಾಕ್ಯಗಳೇ ಅಲ್ಲದೆ, ಮನುಷ್ಯ (ಮುಸ್ಲಿಮ್) ಜೀವಿಸುವ ಜೀವನ ವಿಧಾನವನ್ನು ಕುರಿತು ಸಹ ಬರೆಯುವುದು ನಡೆದಿದೆ. ಪ್ರವಕ್ತರವರು ಮರಣಿಸಿದ್ದಾನಾದ್ದರಿಂದ ಪ್ರವಕ್ತರವರಿಗಾಗಲಿ, ಜಿಬ್ರಯೇಲ್‌ರವರಿಗಾಗಲಿ ಖುರಾನ್‌ನಲ್ಲಿ ಯಾವ ವಿಷಯಗಳಿರುವುದು ತಿಳಿಯದೆಂದೇ ಹೇಳಬಹುದು. ಜಿಬ್ರಯೇಲ್ ಹೇಳಿದ ಜ್ಞಾನವಾಕ್ಯಗಳೆಲ್ಲವೂ ಖುರಾನ್ ಗ್ರಂಥದಲ್ಲಿ ಇವೆ. ಆದರೇ ಅವುಗಳೊಂದಿಗೆ ಸಾಮಾಜಿಕ ಜ್ಞಾನವೂ ಸಹ ಇದೆಯೆಂದು ಹೇಳಬಹುದು. ಸ್ಥೂಲ ವಿಷಯಗಳೆಂದು (ಮುಹ್ಕಮಾತ್) ವಿಷಯಗಳು ಯಾವುವು ಹೇಳಲ್ಪಟ್ಟಿವೆಯೋ ಅವೆಲ್ಲವೂ ಸಾಮಾಜಿಕ ಜೀವನ ವಿಧಾನವನ್ನು ಕುರಿತಾದ ನೀತಿ ವಾಕ್ಯಗಳೇ ಎಂದು ತಿಳಿಯಬೇಕು. ಇದರ ಪ್ರಕಾರ ಖುರಾನ್ ಗ್ರಂಥದಲ್ಲಿ ದೇವರ ಜ್ಞಾನ ವಾಕ್ಯಗಳು ಇವೆ. ಪ್ರಪಂಚ ಸಂಬಂಧ ನೀತಿ ವಾಖ್ಯಗಳು ಇವೆ. ಯಾರಿಗೆ ಬೇಕಾಗಿರುವವು ಅವರು ಅದರಲ್ಲಿಂದ ತೆಗೆದುಕೊಳ್ಳಬಹುದು. ನಾವು ಖುರಾನ್ ಗ್ರಂಥದಲ್ಲಿನ ಜ್ಞಾನ ವಾಕ್ಯಗಳನ್ನು ಮಾತ್ರ ಗ್ರಹಿಸಿ ನೀತಿ ವಾಕ್ಯಗಳನ್ನು ಬಿಟ್ಟುಹಾಕುತ್ತಿದ್ದೇವೆ.

**29) ಪ್ರ :– ನಾವು ನಿಮ್ಮನ್ನು ಗೀತೆಯಲ್ಲಿ ಒಂದು ಶ್ಲೋಕವನ್ನು ಹೇಳಿ ಅದು ಹೇಗೆ ಅರ್ಥವಾಗಲಿಲ್ಲವೋ ಹೇಳಬೇಕೆಂದಿದ್ದೇವಲ್ಲವೆ! ಹಾಗಿರುವಾಗ ನೀವು**

**ಖುರಾನ್‌ನಲ್ಲಿನ ಸೂಕ್ಷ್ಮ ಜ್ಞಾನ ವಾಕ್ಯವನ್ನು ಮನುಷ್ಯರು ಹೇಗೆ ಅರ್ಥ ಮಾಡಿಕೊಳ್ಳಲಿಲ್ಲವೋ ಹೇಳದೆ, ಸ್ಥೂಲವಾದ ಪ್ರಪಂಚ ವಿಷಯವನ್ನು ಕುರಿತು ಹೇಳಿದ್ದೀರ? ನಾನು ಕೇಳಿರುವುದು ಒಂದು, ನೀವು ಹೇಳಿರುವುದು ಮತ್ತೊಂದು.**

**ಉತ್ತರ :–** ನೀವು ಕೇಳಿರುವುದು ಭಗವದ್ಗೀತೆಯ ಹಾಗೆ ಅರ್ಥವಾಗದ ವಾಕ್ಯವನ್ನು ಖುರಾನ್‌ನಿಂದ ತೆಗೆದು ಹೇಳೆಂದಿದ್ದೀರ. ಖುರಾನ್‌ನಲ್ಲಿ ಒಂದು ವಿಧವಾಗಿ ಬರೆದಿರುವಾಗ, ನಮಗೆ ಮತ್ತೊಂದು ವಿಧವಾಗಿ ಅರ್ಥವಾಗಿದೆಯೆಂದು ತಿಳಿಸುವ ನಿಮಿತ್ತ (2–187) ನೇ ವಾಕ್ಯವನ್ನು ತೆಗೆದು ಹೇಳಿದ್ದೇವೆ. ಖುರಾನ್ ಗ್ರಂಥ ದೈವ ಗ್ರಂಥ. ಅದರಲ್ಲಿ ಕೆಲವು ಪ್ರಪಂಚ ವಾಕ್ಯಗಳು ಬೆರೆತರೂ, ಅದನ್ನು ದೈವ ಗ್ರಂಥವೆಂದೇ ಹೇಳಬಲ್ಲೆವು. ಅಕ್ಕಿಯಲ್ಲಿ ಕೆಲವು ಕಲ್ಲುಗಳು ಬೆರತರೂ ಅವುಗಳನ್ನು ಅಕ್ಕಿ ಎಂದೇ ಹೇಳುತ್ತೇವೆ. ಹಾಗೆಯೇ ಅಂತಿಮ ದೈವಗ್ರಂಥದಲ್ಲಿ ಕೆಲವು ಸಾಮಾಜಿಕ ವಿಷಯಗಳಿದ್ದರೂ ಅದನ್ನು ದೈವ ಗ್ರಂಥವೆಂದೇ ಹೇಳುತ್ತಿದ್ದೇವೆ. ಅಕ್ಕಿಯಲ್ಲಿ ಕಲ್ಲುಗಳನ್ನು ಬೇರ್ಪಡಿಸಿ ಅಕ್ಕಿಯನ್ನು ಮಾತ್ರ ತಿಂದಹಾಗೆ, ಖುರಾನ್ ಗ್ರಂಥದಲ್ಲಿನ ಸಾಮಾಜಿಕ ವಿಷಯಗಳನ್ನು ಬಿಟ್ಟು ಕೇವಲ ಜ್ಞಾನ ವಿಷಯಗಳನ್ನು ಮಾತ್ರ ಸ್ವೀಕರಿಸಬಹುದು. ಅದೇ ವಿಧವಾಗಿ ನಾವು ಗತದಲ್ಲಿ ಬರೆದ ಖುರಾನ್ ಗ್ರಂಥಕ್ಕೆ **"ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು"** ಎಂದು ಹೆಸರಿಟ್ಟಿದ್ದೇವೆ. ಅದರಲ್ಲಿ ಸಾಮಾಜಿಕ ವಿಷಯಗಳನ್ನು ಪಕ್ಕದಲ್ಲಿಟ್ಟು ಕೇವಲ ಜ್ಞಾನ ವಾಕ್ಯಗಳಿಗೆ ಮಾತ್ರ ವಿವರ ಬರೆಯುವುದು ನಡೆದಿದೆ. ಈಗ ನೀವು ಪ್ರತ್ಯೇಕಿಸಿ ಜ್ಞಾನ ವಾಕ್ಯಗಳ ಬಗ್ಗೆ ಪ್ರಜೆಗಳ ಅವಗಾಹನೆ ಹೇಗಿದೆಯೋ ಹೇಳೆಂದಿದ್ದೀರ. ಸೂಕ್ಷ್ಮವಾದ ಜ್ಞಾನವನ್ನು ಹೇಗೆ ಸರಿಯಾಗಿ ಅರ್ಥ ಮಾಡಿಕೊಳ್ಳಲಾರದೆ ಹೋಗುತ್ತಿದ್ದೇವೋ ಅವುಗಳನ್ನು ಕುರಿತು ಹೇಳಿಕೊಳ್ಳೋಣ.

ಖುರಾನ್ ಗ್ರಂಥದಲ್ಲಿನ ವಾಕ್ಯಗಳನ್ನು ಮೊದಲೇ (3–7) ಆಯತ್‌ನಲ್ಲಿ ಎರಡು ವಿಧಗಳಾಗಿ ವರ್ಣಿಸಿ ಹೇಳಿದ್ದಾನೆ. ಅದರಲ್ಲಿ ಒಂದು ವಿಧ ಸ್ಥೂಲವಾದ ಮುಹ್ಕಮಾತ್ ವಾಕ್ಯಗಳೆಂದು, ಸೂಕ್ಷ್ಮವಾದ ಮುತಷಾಭಿಹಾತ್ ವಾಕ್ಯಗಳೆಂದು ಹೇಳುವುದೇ ಅಲ್ಲದೆ ಮುತಷಾಭಿಹಾತ್ ವಾಕ್ಯಗಳು ಜ್ಞಾನದೊಂದಿಗೆ ಕೂಡಿಕೊಂಡಿವೆಯೆಂದು ಹೇಳುವುದಾಗಿದೆ. ಜ್ಞಾನದೊಂದಿಗೆ ಕೂಡಿಕೊಂಡ

ವಾಕ್ಯಗಳ ವಿವರ ದೇವರು ಹೇಳಿದರೇನೇ ಅರ್ಥವಾಗುತ್ತದೆಂದು ಸಹ ಹೇಳಿದ್ದಾನೆ. ಆ ಮಾತಿನಿಂದಲೇ ಸ್ಥೂಲವಾದ ವಾಕ್ಯಗಳಲ್ಲಿ ಜ್ಞಾನವಿಲ್ಲವೆಂದು, ಅವುಗಳ ವಿವರವನ್ನು ಸಾಧಾರಣ ಮನುಷ್ಯರು ಸಹ ಹೇಳಿಕೊಳ್ಳಬಹುದೆಂದು ತಿಳಿದುಹೋಗಿದೆ. ಇದಕ್ಕೂ ಮೊದಲು ನಾವು ಹೇಳಿಕೊಂಡ ಸ್ತ್ರೀ ಪುರುಷರ ಸಂಗಮ ವಿಷಯ ಸ್ಥೂಲವಿಷಯವೆಂದು ಅದರಲ್ಲಿ ನೀತಿ ಹೊರತು ಜ್ಞಾನವಿಲ್ಲವೆಂದು ತಿಳಿದುಹೋಗಿದೆ. **"ನೀತಿ ಲೋಕ ಸಂಬಂಧ, ಜ್ಞಾನ ದೈವ ಸಂಬಂಧವೆನ್ನುವ"** ಸೂತ್ರದ ಪ್ರಕಾರ ಲೋಕಸಂಬಂಧವಾದ ವಾಕ್ಯಗಳನ್ನು ಬಿಟ್ಟು ಜ್ಞಾನ ಸಂಬಂಧವಾದ ವಾಕ್ಯಗಳನ್ನು ನೋಡುವುದಕ್ಕೆ ಮೊದಲು ಆ ಎರಡು ವಾಕ್ಯಗಳಿಗೂ ಮಧ್ಯದಲ್ಲಿರುವ ತಾರತಮ್ಯಗಳನ್ನು ಸ್ವಲ್ಪ ಗಮನಿಸೋಣ. ಸೂರಾ ಎರಡರಲ್ಲಿ 187 ಆಯತ್‌ನ್ನು ನೋಡಿದ್ದೇವಲ್ಲವೆ! ಅಲ್ಲೇ ಇರುವ 186ನೇ ವಾಕ್ಯವನ್ನು ವಿವರಿಸಿಕೊಂಡು ನೋಡೋಣ.

**(2–186) "ಓ ಪ್ರವಕ್ತಾ! ನನ್ನ ದಾಸರು ನನ್ನನ್ನು ಕುರಿತು ನಿನ್ನನ್ನು ಕೇಳಿದರೇ, ನಾನು ಅವರಿಗೆ ಅತ್ಯಂತ ಸಮೀಪದಲ್ಲಿ ಇದ್ದೇನೆಂದು, ಕರೆಯುವವನು ನನ್ನನ್ನು ಯಾವಾಗ ಕರೆದರೂ ನಾನು ಆತನ ಕರೆಯನ್ನು ಆಲಿಸಿ ಆಮೋದಿಸುತ್ತೇನೆಂದು ನೀನು ಅವರಿಗೆ ಹೇಳು. ಅವರು ಸಹ ನನ್ನ ಆದೇಶವನ್ನು ಶಿರಸಾವಹಿಸಬೇಕು. ನನ್ನನ್ನು ವಿಶ್ವಾಸಿಸಬೇಕು. ಅದರಿಂದಲೇ ಅವರು ಸನ್ಮಾರ್ಗ ಭಾಗ್ಯ ಹೊಂದುತ್ತಾರೆ."**

ಈ ವಾಕ್ಯ ಪೂರ್ತಿ ಸೂಕ್ಷ್ಮವಾದ ಜ್ಞಾನದೊಂದಿಗೆ ಕೂಡಿಕೊಂಡ ವಾಕ್ಯವೆಂದು ತಿಳಿದುಹೋಗುತ್ತಿದೆ. ದೇವರು ನಮಗೆ ಅತ್ಯಂತ ಸಮೀಪದಲ್ಲಿರುವವನೆಂದು ಹೇಳಿದ್ದಾನೆ. ದೇವರು ಯಾವ ರೀತಿಯಾಗಿ ಬಹಳ ಹತ್ತಿರವಾಗಿ ಇದ್ದಾನೋ ನಮಗೆ ತಿಳಿದಿಲ್ಲ. ದೇವರು ಕಾಣಿಸುವವನು ಅಲ್ಲ. ಇದೆಲ್ಲಾ ಸೂಕ್ಷ್ಮವಾದ ಜ್ಞಾನವಿಷಯವೆಂದು ಸುಲಭವಾಗಿ ತಿಳಿದುಹೋಗುತ್ತಿದೆ. ಈ ವಿಧವಾಗಿ ಹೊರಗೆ ಕಾಣಿಸದ ವಿಷಯವನ್ನು ಸೂಕ್ಷ್ಮವಾದ ಜ್ಞಾನವಿಷಯವಾಗಿ ಹೇಳಿಕೊಳ್ಳಬಹುದು. ಇದು 186ನೇ ವಾಕ್ಯವಾದಾಗ, ಪಕ್ಕದಲ್ಲೇ 187 ನೇ

ವಾಕ್ಯ ಪೂರ್ತಿ ಹೊರಗೆ ತಿಳಿಯುವ ಪ್ರಪಂಚ ವಿಷಯವಾಗಿ ಇದೆ. ಒಂದೇ ಸೂರಾದಲ್ಲಿ ಪಕ್ಕಪಕ್ಕದಲ್ಲಿರುವ ವಾಕ್ಯಗಳಲ್ಲಿ ಒಂದು ಪರಮಾತ್ಮ ಸಂಬಂಧವಾದಾಗ, ಮತ್ತೊಂದು ಪ್ರಪಂಚ ಸಂಬಂಧವಾಗಿ ಇದೆ. ಈ ವಿಧವಾಗಿ ಇರುವ ವಾಕ್ಯಗಳನ್ನು ಖುರಾನ್ ಗ್ರಂಥದಲ್ಲಿ ಅನೇಕ ಕಡೆ ನೋಡಬಹುದು. ಕೆಲವು ಕಡೆ ನೂರಕ್ಕೆ ಶೇ. 80 ವಾಕ್ಯಗಳು ಪ್ರಪಂಚ ಸಂಬಂಧವಾಗಿ ಇರುವಾಗ ಶೇ. 20 ವಾಕ್ಯಗಳು ದೈವ ಸಂಬಂಧವಾಗಿ ಇರುತ್ತವೆ. ಮೊದಲು ನಾವು ಒಂದು ಸೂತ್ರವನ್ನು ಹೇಳಿಕೊಂಡಿದ್ದೇವೆ. ಅದರ ಪ್ರಕಾರವಾದರೇ ಎರಡು ಭಾಗಗಳು ಸ್ಥೂಲ ಜ್ಞಾನವಿರುವಾಗ, ಮೂರು ಭಾಗಗಳು ಸೂಕ್ಷ್ಮ ಜ್ಞಾನ ಪ್ರತಿ ದೈವ ಗ್ರಂಥದಲ್ಲಿಯೂ ಇವೆ.

ಈಗ ನೀನು ಕೇಳಿದಂತೆ ಸೂಕ್ಷ್ಮವಾದ ಜ್ಞಾನ ವಿಷಯವನ್ನು ಮನುಷ್ಯರು ಹೇಗೆ ಅರ್ಥ ಮಾಡಿಕೊಂಡಿಲ್ಲವೋ ವಿವರಿಸುತ್ತೇನೆ ನೋಡಿರಿ. ಸೂರಾ ಆರು, ಆಯತ್ 95ನ್ನು ನೋಡೋಣ.

**(6–95) "ನಿಸ್ಸಂದೇಹವಾಗಿ ಬೀಜವನ್ನು ಸಿಪ್ಪೆಯನ್ನು ಸೀಳಿಸುವವನು ಅಲ್ಲಾಹ್‌ನೇ ಆತನು ಜೀವವಿರುವುದನ್ನು ಜೀವ ಇಲ್ಲದರಲ್ಲಿಂದ ತೆಗೆಯುತ್ತಾನೆ. ಜೀವ ಇಲ್ಲದ್ದನ್ನು ಜೀವವಿರುವುದರಲ್ಲಿಂದ ತೆಗೆಯುವವನು ಆತನೇ. ಆತನೇ ಅಲ್ಲಾಹ್ (ದೇವರು). ಹಾಗಿರುವಾಗ ನೀವು ಸತ್ಯದಿಂದ ಎಲ್ಲಿಗೆ ಮರಳಿ ಹೋಗುತ್ತಿದ್ದೀರ?"**

ಈ ವಾಕ್ಯ ಖುರಾನ್ ಗ್ರಂಥದಲ್ಲಿ ಅತ್ಯಂತ ಸೂಕ್ಷ್ಮವಾದ ಜ್ಞಾನದಿಂದ ಕೂಡಿಕೊಂಡ ದೈವ ವಾಕ್ಯವೆಂದು ಹೇಳಬಹುದು. ಈ ವಾಕ್ಯ ಅರ್ಥವಾಗಬೇಕೆಂದರೇ ತಪ್ಪದೆ 6,600 ವರ್ಷಗಳು ಹಿಡಿಯುತ್ತದೆಂದು ಹೇಳದೆ ತಪ್ಪುವುದಿಲ್ಲ. ಈ ವಾಕ್ಯ ಭಗವದ್ಗೀತೆಯಲ್ಲಿ ಸಾಂಖ್ಯಯೋಗವಾದ 22ನೇ ಶ್ಲೋಕದಲ್ಲಿ ಸೂಚನಾ ಪ್ರಾಯವಾಗಿ ಇದೆ. ಖುರಾನ್‌ನಲ್ಲಿ ಇದ್ದಂತೆ ಭಗವದ್ಗೀತೆಯಲ್ಲಿ ಇಲ್ಲದೆ ಹೋದರೂ ಸ್ವಲ್ಪ ಭಾಷಾ ಬೇಧದಿಂದ ಇರುವ ಮಾತು ವಾಸ್ತವವೇ!

ಈ ವಾಕ್ಯವನ್ನು ಮುಸ್ಲಿಮ್‌ರೆಲ್ಲರೂ ಚೆನ್ನಾಗಿ ತಿಳಿದಂತೇ ಹೇಳಿಕೊಳ್ಳುತ್ತಿರುವರು. ಸಂಪೂರ್ಣವಾಗಿ ಅದರ ಭಾವನೆ ತಿಳಿದಂತೆ ಹೇಳಿ ಕೊಳ್ಳುತ್ತಿರುವರು. ಅವರಿಗೆ ತಿಳಿದ ವಿವರವನ್ನು ಸುಲಭವಾಗಿ ಹೇಳುತ್ತಿರುವರು. ಆದರೇ ಈ ವಾಕ್ಯಕ್ಕೆ ಅರ್ಥ ಇಲ್ಲಿಯವರೆಗು ಅಧರ್ಮವಾಗಿಯೇ ಅರ್ಥ ವಾಗಿದೆಯೆಂದು, ಧರ್ಮಬದ್ಧವಾಗಿ ತಿಳಿದುಕೊಳ್ಳಬೇಕೆನ್ನುವ ವಿಷಯವನ್ನು ಪೂರ್ತಿ ಮರೆತುಹೋಗಿದ್ದಾರೆ. ಅವರ ನಂಬಿಕೆ ಪ್ರಕಾರ ತಾವು ತಿಳಿದವರೇ! ಎಂದು ಅಂದುಕೊಳ್ಳುತ್ತಿದ್ದಾರೆ. ಇಲ್ಲಿ ನಾವು ಮೊದಲು ತಿಳಿದುಕೊಳ್ಳಬೇಕಾದ ವಿಷಯವೇನೆಂದರೇ! ಇದು ಜನ್ಮಗಳಿಗೆ ಸಂಬಂಧಿಸಿದ ವಿಷಯವೆಂದು ತಿಳಿದರೂ, ಒಬ್ಬ ಮನುಷ್ಯನಲ್ಲಿನ ಜೀವಿಯು ಎಲ್ಲಿಂದ ಬಂದು ಶಿಶುವಾಗಿ ಹುಟ್ಟುತ್ತಿದ್ದಾನೋ ತಿಳಿದಿಲ್ಲ. ಜೀವಿಯು ಕಾಣಿಸುವವನಲ್ಲ. ಹುಟ್ಟುವ ಶರೀರ ಕಾಣಿಸಿದರೂ ಇದು ಸ್ಥೂಲವಾಕ್ಯ ಅಲ್ಲ. ಇದು ಅತ್ಯಂತ ಕೀಲಕವಾದ ಸೂಕ್ಷ್ಮವಾಕ್ಯವೆಂದು ತಿಳಿಯುತ್ತಿದೆ. ಭೂಮಿ ಮೇಲೆ ಎಂದರೆ ಪ್ರಪಂಚದಲ್ಲಿ ಮೂರು ವಿಧಗಳ ಜನ್ಮಗಳು ಇವೆ. ಅವುಗಳನ್ನೇ ವರಸೆ ಕ್ರಮದಲ್ಲಿ **ಅಂಡಜ, ಪಿಂಡಜ, ಉದ್ಭಿಜಗಳೆಂದು** ಹೇಳುತ್ತಿರುವರು. ಮೊಟ್ಟೆಯಿಂದ ಹುಟ್ಟುವವುಗಳನ್ನು ಅಂಡಜಗಳೆಂದು ಕರೆಯುತ್ತೇವೆ. ಹಾಗೆಯೇ ಪಿಂಡದಿಂದ (ತಾಯಿ ಗರ್ಭದಿಂದ) ಹುಟ್ಟುವವುಗಳನ್ನು ಪಿಂಡಜಗಳೆನ್ನುತ್ತೇವೆ. ಬೀಜದಿಂದ ಹುಟ್ಟುವವುಗಳನ್ನು ಉದ್ಭಿಜಗಳೆಂದು ಕರೆಯುತ್ತೇವೆ. ಈ ಮೂರು ವಿಧಗಳ ಹುಟ್ಟುವಿಕೆಗಳು ಎಲ್ಲರಿಗೂ ತಿಳಿದಿರುವವೇ. ಈ ಮೂರು ವಿಧಗಳಲ್ಲಿ ಯಾವುದು ಹೇಗೆ ಹುಟ್ಟುತ್ತಿದೆಯೋ, ಹುಟ್ಟುವ ಸಮಯದಲ್ಲಿ ಏನು ನಡೆಯುತ್ತಿದೆಯೋ ಯಾರಿಗೂ ತಿಳಿದಿಲ್ಲ.

ಒಂದು ಮನುಷ್ಯರ ವಿಷಯವನ್ನು ಗಮನಿಸಿದರೇ ಮನುಷ್ಯರು ತಾಯಿಗರ್ಭದಿಂದ ಹುಟ್ಟುತ್ತಿದ್ದಾರೆಂದು ಎಲ್ಲರೂ ಹೇಳುತ್ತಿದ್ದಾರೆ. ಇಲ್ಲಿ ನಾವು ಸ್ವಲ್ಪ ತಿಳಿಯಬೇಕಾಗಿರುವುದು ಇದೆ. ಗರ್ಭದಲ್ಲಿ ಬೆಳೆಯುವುದು ಪಿಂಡ, ಪಿಂಡದಲ್ಲಿ ಹುಟ್ಟುವುದು ಪಿಂಡಜ ಎಂದು ಅನ್ನುತ್ತಿದ್ದೇವೆ. ಈ ಲೆಕ್ಕ ಪ್ರಕಾರ ನೋಡಿದರೇ ಗರ್ಭದಿಂದ ಹುಟ್ಟುತ್ತಿದ್ದೇವೆ ಎನ್ನುವ ಮಾತು ಅಸತ್ಯವೆಂದು, ಪಿಂಡದಿಂದ ಹುಟ್ಟುವಮಾತು ಸತ್ಯವೆಂದು ಹೇಳಬಹುದು. ಮನುಷ್ಯರಾದ ನಾವೆಲ್ಲರೂ

ಪಿಂಡದಿಂದ ಹುಟ್ಟಿದವರೆ. ಆದರೇ ಒಬ್ಬನೇ ಒಬ್ಬನು ಮಾತ್ರ ಗರ್ಭದಿಂದ ಹುಟ್ಟುವವನು ಇದ್ದಾನೆ. ಆತನನ್ನು ಕುರಿತು ನಂತರ ಹೇಳಿಕೊಳ್ಳೋಣ. ಪಿಂಡದ ನಂತರ ಮೊಟ್ಟೆಯಿಂದ ಹುಟ್ಟುವ ಪಕ್ಷಿಗಳು, ಹಲ್ಲಿಗಲು, ಕಪ್ಪೆಗಳು ಮುಂತಾದವೆಲ್ಲವೂ ಅಂಡಜಗಳೆಂದೇ ಹೇಳಬಹುದು. ಇಲ್ಲಿ ಎಲ್ಲರಿಗೂ ಕಾಣಿಸುವ ಸತ್ಯ ಒಂದು ಇದೆ. ಅದೇನೆಂದರೇ! ಪ್ರಾಣವಿಲ್ಲದ ಮೊಟ್ಟೆಯಿಂದ ಪ್ರಾಣವಿರುವ ಪಕ್ಷಿ ಹುಟ್ಟುತ್ತಿದೆಯೆಂದು ಎಲ್ಲರಿಗೂ ತಿಳಿದಿದೆ. ಜೀವವಿಲ್ಲದ ಮೊಟ್ಟೆಯಿಂದ ಜೀವವಿರುವ ಪಕ್ಷಿಯಾಗಲೀ, ಹಾವಾಗಲೀ ಹುಟ್ಟುತ್ತಿರುವುದು ಕೆಲವು ಕಡೆ ಕೆಲವರು ನೋಡಿಯೇ ಇರುತ್ತಾರೆ. ಆದ್ದರಿಂದ ಖುರಾನ್ ಗ್ರಂಥದಲ್ಲಿ 6–95 ವಾಕ್ಯದಲ್ಲಿ **"ಜೀವವಿಲ್ಲದ ಅದರಿಂದ ಜೀವವಿರುವುದು ಹುಟ್ಟುತ್ತಿದೆಯೆಂದು"** ಹೇಳಿದಂತೆ ಇದೆ. ವಾಕ್ಯದಲ್ಲಿ **"ಜೀವವಿರುವ ಅದನ್ನು ಜೀವ ಇಲ್ಲದ ಅದರಿಂದ ತೆಗೆಯುತ್ತಾನೆ"** ಎಂದು ಇದೆ. ಇಲ್ಲಿ ಜೀವವಿರುವುದು ಎಂದರೆ ಹುಟ್ಟುವಿಕೆಯಿಂದಲೇ ಜೀವವಿರುವುದೆಂದು ಅರ್ಥ. ಮೊಟ್ಟೆ ಜೀವವಿಲ್ಲದ್ದಾಗಿ ಇರುತ್ತದೆ. ಹಾಗೆ ಜೀವ ಇಲ್ಲದ್ದಾಗಿ ಇರುವ ಮೊಟ್ಟೆಯಿಂದ ಸಜೀವವಾಗಿ ಪಕ್ಷಿ ಹುಟ್ಟುತ್ತಿದೆಯಲ್ಲವೆ! ಆದ್ದರಿಂದ ಮೇಲಿನ ವಾಕ್ಯದಲ್ಲಿ 'ಜೀವವಿರುವ ಅದನ್ನು ಜೀವ ಇಲ್ಲದ ಅದರಿಂದ ತೆಗೆಯುತ್ತಾನೆ' ಎಂದು ಹೇಳುವುದಾಗಿದೆ. ಈ ಮಾತು ಸತ್ಯವೇ ಎಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಏಕೆಂದರೇ! ಇದು ಕಾಣಿಸುವ ಸತ್ಯವಾಗಿ ಇದೆ. ಆದ್ದರಿಂದ ಈ ಮಾತಿಗೆ ಯಾರೂ ಆತಂಕ ಹೇಳುವುದಿಲ್ಲ.

ಪಿಂಡಜ ವಿಷಯದೊಳಗೆ ಬಂದರೇ **"ಜೀವ ಇಲ್ಲದ್ದನ್ನು ಜೀವವಿರುವುದರಿಂದ ತೆಗೆಯುವವನು ಆತನೇ"** ಎಂದು ವಾಕ್ಯದಲ್ಲಿ ಇದೆ. ಆದರೆ ಈ ವಾಕ್ಯವನ್ನು ಯಾರೂ ನಂಬದಂತಿದ್ದಾರೆ. ಏಕೆಂದರೇ! ತಾಯಿ ಗರ್ಭದಿಂದ ಹುಟ್ಟುವ ಶಿಶು ಶರೀರ ಸಜೀವವಾಗಿ ಹುಟ್ಟುತ್ತಿದೆಯೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಆದರೇ ಹಾಗೆ ಹುಟ್ಟುವುದು ಅಸಂಭವವೆಂದು, ಅದು ನಡೆಯುವ ಕೆಲಸವಲ್ಲವೆಂದು ತಿಳಿದುಹೋಗುತ್ತಿದೆ. ಹಾಗೆ ಗರ್ಭದಿಂದ ಯಾರಾದರೂ ಹುಟ್ಟಿದರೇ ಅವನನ್ನು "ಗರ್ಭಜ" ಎಂದು ಅನ್ನಬಹುದು

ಆದರೆ, **"ಪಿಂಡಜ"** ಎಂದು ಕರೆಯಬಾರದು. ಆದರೇ ನಾವೆಲ್ಲಾ ಪಿಂಡದಿಂದ ಹುಟ್ಟಿದವರೇ. ಸಜೀವವಾದ ತಾಯಿ ಶರೀರದಿಂದ ನಿರ್ಜೀವವಾದ ಶಿಶು ಶರೀರ ಹುಟ್ಟುತ್ತಿದೆ. ಆದರೇ ಇದು ಕೂಡಾ ಕಾಣಿಸುವ ವಿಷಯವೇ ಆದರೂ ಬಹಳ ಜನರಿಗೆ ಈ ವಿಷಯ ತಿಳಿಯದಂತೆ ಹೋಗಿದೆ. ನಮಗೆ ತಿಳಿದರೂ ತಿಳಿಯದೆ ಹೋದರೂ ಇರುವ ಸತ್ಯ ಅಷ್ಟೇ! ಆದ್ದರಿಂದ ಮೇಲಿನ ವಾಕ್ಯದಲ್ಲಿ **"ಜೀವ ಇಲ್ಲದ್ದನ್ನು ಜೀವವಿರುವ ಅದರಿಂದ ತೆಗೆಯುವವನು ದೇವರೇ ಎಂದು"** ಹೇಳಿದ್ದಾರೆ. ಮೇಲಿನ ವಾಕ್ಯದಲ್ಲಿ ಇರುವ ಧರ್ಮ ಅದೇ ಆದರೂ ಅದರಲ್ಲಿನ ಧರ್ಮವನ್ನು ಮನುಷ್ಯ ವಾಕ್ಯದಿಂದ ಗ್ರಹಿಸಲಾರದಂತಿದ್ದಾನೆ. ಆದ್ದರಿಂದ 6–95 ನೇ ವಾಕ್ಯ ಅರ್ಥವಾಗದ ಸ್ಥಿತಿಯಲ್ಲಿ ನಿಂತುಹೋಗಿದೆ. ಈ ವಾಕ್ಯವನ್ನು ಬಹಳ ಮಂದಿ ಬೇರೆ ವಿಧವಾಗಿ ಅರ್ಥ ಮಾಡಿಕೊಂಡು ಅಧರ್ಮವನ್ನೇ ಗ್ರಹಿಸಿದ್ದಾರೆ. ವಾಕ್ಯದಲ್ಲಿರುವ ಧರ್ಮವನ್ನು ಗ್ರಹಿಸಲಾರದೆ ಹೋಗಿದ್ದಾರೆ. ಈ ವಾಕ್ಯದಲ್ಲಿನ ಧರ್ಮ ಸಂಪೂರ್ಣವಾಗಿ ತಿಳಿಯಬೇಕೆಂದರೇ ನಾವು ಬರೆದ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥವನ್ನು ಓದಿರಿ.

ಈ ವಾಕ್ಯವನ್ನು ಬಹಳ ಜನ ಬೋಧಕರಾಗಿರುವ ಮುಸ್ಲಿಮ್‌ರು, ಮತ ಹಿರಿಯರಾಗಿರುವ ಮುಸ್ಲಿಮ್‌ರು ಓದಿದ್ದಾರೆ. ಈ ವಾಕ್ಯವನ್ನು ಸೂರಾ, ಆಯತ್ ನಂಬರ್‌ನ್ನು ಹೇಳುವುದೇ ಅಲ್ಲದೆ, ಇಂತಹ ಪುಟದಲ್ಲಿ ಇದೆಯೆಂದು ಪುಟದ ನಂಬರೊಂದಿಗೆ ಸಹ ಹೇಳುವ ಮುಸ್ಲಿಮ್ ಪಂಡಿತರು ಇದ್ದಾರೆ. ಅದೆಲ್ಲಾ ಜ್ಞಾಪಕಶಕ್ತಿಗೆ ಸಂಬಂಧಿಸಿದ ವಿಷಯ. ಜ್ಞಾಪಕಶಕ್ತಿ ಇರುವವರ ಹತ್ತಿರ ಜ್ಞಾನ ಶಕ್ತಿ ಇದೆಯೆನ್ನುವ ನಂಬಿಕೆ ಇಲ್ಲ. ಆದ್ದರಿಂದ ಜ್ಞಾಪಕಶಕ್ತಿಯಿಂದ ಸುಲಭವಾಗಿ ವಾಕ್ಯವನ್ನು ಹೇಳುವವರಿಗೆ ಕೂಡಾ ಇದು ಧರ್ಮಬದ್ಧವಾಗಿ ಅರ್ಥವಾಗಲಿಲ್ಲವೆಂದು ಹೇಳಬಹುದು. ಒಂದು ಬಾರಿ ಕೆಲವರು ಮುಸ್ಲಿಮ್ ಹಿರಿಯರು ತಮ್ಮ ಮತದೊಳಗೆ ಸೇರಿರೆಂದು, ಇಸ್ಲಾಮ್ ಮತದಲ್ಲಿ ಎಷ್ಟೋ ಜ್ಞಾನವಿದೆಯೆಂದು, ನೀವು ಇಸ್ಲಾಮ್ ಮತಕ್ಕೆ ಬಹಳ ಹತ್ತಿರವಾಗಿ ಇದ್ದೀರೆಂದು ಆದ್ದರಿಂದ ಇಸ್ಲಾಮ್‌ನಲ್ಲಿ ಸೇರುವುದಕ್ಕೆ ಬಹಳ ಯೋಗ್ಯರಾಗಿ ಇದ್ದೀರೆಂದು ಬಹಳ ವಿಧಗಳಾಗಿ ನಮ್ಮನ್ನು ಮತಮಾರ್ಪಾಟಿಗೋಸ್ಕರ ಒಂದು ಬಾರಿ

ವೈಜಾಗ್‌ನಲ್ಲಿ ಪ್ರೇರೇಪಿಸಿದ್ದಾರೆ. ಆಗ ನಾನು ಹೀಗೆ ಮಾತನಾಡಿದ್ದೇನೆ, ಅವರು ನನ್ನ ಮಾತುಗಳನ್ನು ಪೂರ್ತಿಯಾಗಿ ಕೇಳಿದ್ದಾರೆ. "ನಾನು ಹಿಂದೂಮತದಲ್ಲಿ ಹುಟ್ಟಿದರೂ ನನಗೆ ಎಲ್ಲ ಮತಗಳು ಸಮಾನವೇ. ಆದರೇ ಈ ಮಧ್ಯ ಕಾಲದಲ್ಲಿ ಖುರಾನ್ ಗ್ರಂಥದಲ್ಲಿನ ವಾಕ್ಯಗಳ ಕುರಿತು ನನಗೆ ತಿಳಿದಷ್ಟು ವಿವರವಾಗಿ ಹೇಳುತ್ತಿರುವುದು ವಾಸ್ತವವೇ. ಅಷ್ಟು ಮಾತ್ರಕ್ಕೆ ಖುರಾನ್ ಗ್ರಂಥದಲ್ಲಿನ ಎಲ್ಲ ವಿಷಯಗಳಿಗು ವಿವರ ತಿಳಿದಿಲ್ಲ. ಅದರಲ್ಲಿ ಜ್ಞಾನ ನನಗೆ ಪೂರ್ತಿ ತಿಳಿದಾಗ ನಾನು ಅದರೊಳಗೆ ಬಂದರೇ ಚೆನ್ನಾಗಿರುತ್ತದೆ. ಹಾಗೆ ಏನೂ ತಿಳಿಯದಿರುವಾಗ ಆ ಮತದೊಳಗೆ ನಾನು ಬಂದರೇ, ಯಾರಾದರೂ ಒಂದು ವಾಕ್ಯಕ್ಕೆ ವಿವರ ಕೇಳಿದರೇ ಅದಕ್ಕೆ ವಿವರ ಹೇಳಬೇಕಲ್ಲವೆ! ಆಗ ಆ ವಿವರ ತಿಳಿಯದೆ ಹೋಗಿ ಉತ್ತರವನ್ನು ಹೇಳಲಾರದೇ ಹೋದರೆ ನನಗೆ ಮರ್ಯಾದೆ ಹೋದಂತಾಗುತ್ತದೆ. ಹಿಂದೂಮತದಲ್ಲಿದ್ದು ಪ್ರತಿ ಪ್ರಶ್ನೆಗು ಉತ್ತರವನ್ನು ಹೇಳುವ ನಾನು ಅಲ್ಲಿ ಉತ್ತರ ಹೇಳಲಾರದೇ ಹೋದರೆ ಗೌರವಕ್ಕೆ ಲೋಪ ಏರ್ಪಡುತ್ತದೆ. ಆದ್ದರಿಂದ ನಾನು ಖುರಾನ್ ಗ್ರಂಥದಲ್ಲಿ ನನಗೆ ತಿಳಿಯದ ವಾಕ್ಯಗಳನ್ನು ಪೂರ್ತಿಯಾಗಿ ತಿಳಿದುಕೊಂಡು ನಂತರ ನಿಮ್ಮ ಮತದಲ್ಲಿ ಸೇರಬಲ್ಲೆನು" ಎಂದು ಹೇಳಿದ್ದೇನೆ. ಆಗ ಅವರು "ನಿಮಗೆ ಎಲ್ಲಿ ಏನು ತಿಳಿದಿಲ್ಲವೋ ನಮ್ಮನ್ನು ಕೇಳಿ. ನಾವು ನಿಮಗೆ ವಿವರವಾಗಿ ಹೇಳುತ್ತೇವೆ ಅಷ್ಟೇ ಅಲ್ಲವೆ!" ಎಂದಿದ್ದಾರೆ. ಅದಕ್ಕೆ ನಾನು (6–95) ವಾಕ್ಯವನ್ನೇ ಕೇಳಿದ್ದೇನೆ, ಅದಕ್ಕೆ ಅವರು ಸಂಪೂರ್ಣವಾಗಿ ತಿಳಿದವರ ಹಾಗೆ ವಿವರವನ್ನು ಅವರು ಎಷ್ಟು ವಿಧಗಳಲ್ಲಿ ಹೇಳಬೇಕೆಂದು ಪ್ರಯತ್ನಿಸಿದರೂ, ಮತ್ತೆ ಮತ್ತೆ ಪ್ರಶ್ನಿಸುವುದರಿಂದ ಅವರು ಕೊನೆಗೆ ನಮಗೆ ತಿಳಿದಿಲ್ಲ, ನಮ್ಮ ಹಿರಿಯರನ್ನು ಕೇಳಿ ಹೇಳುತ್ತೇವೆಂದು ಹೇಳುವುದಾಗಿದೆ.

ಆ ದಿನದಂದು ಹೇಳಿದವರಲ್ಲಿ ಇಬ್ಬರು ಮುಖ್ಯವಾಗಿ ಹೇಳಿದ್ದಾರೆ. ಅವರು ಇಬ್ಬರು ಹೇಗೆ ಹೇಳಿದ್ದಾರೋ ನೋಡಿ. ಮೊದಲು ಉತ್ತರ ಹೇಳಿದವರು ಹೀಗೆ ಅಂದಿದ್ದಾರೆ. "ಕೋಳಿಯನ್ನು ಗಮನಿಸಿದರೇ ಕೋಳಿಗೆ ಪ್ರಾಣವಿದೆ. ಪ್ರಾಣವಿರುವ ಕೋಳಿಯಿಂದ ಪ್ರಾಣವಿಲ್ಲದ ಮೊಟ್ಟೆ ಹುಟ್ಟುತ್ತಿದೆಯಲ್ಲವೆ! ಆದ್ದರಿಂದ ವಾಕ್ಯದಲ್ಲಿ ಜೀವವಿರುವ ಅದರಿಂದ ಜೀವ ಇಲ್ಲದ್ದು ಹುಟ್ಟುತ್ತಿದೆ ಯೆಂದು

ಮೊಟ್ಟೆಯನ್ನು ಕುರಿತು ಹೇಳಿದ್ದಾರೆ. ಹಾಗೆಯೇ ಪ್ರಾಣವಿಲ್ಲದ ಮೊಟ್ಟೆಯಿಂದ ಪ್ರಾಣವಿರುವ ಕೋಳಿಮರಿ ಹುಟ್ಟುತ್ತಿದೆಯಲ್ಲವೆ! ಆದ್ದರಿಂದ ಜೀವವಿಲ್ಲದ ಅದರಿಂದ ಜೀವವಿರುವುದು ಹುಟ್ಟುತ್ತಿದೆಯೆಂದು ಹೇಳಿದ್ದಾರೆ." ಖುರ್‌ಆನ್‌ನಲ್ಲಿ ಇರುವ ಎರಡು ವಿಧಾನಗಳ ಜನ್ಮಗಳನ್ನು ಒಂದೇ ಕೋಳಿಹತ್ತಿರ ಸರಿಮಾಡಿದ್ದಾರೆ. ಆದರೇ ದೇವರು ವಾಕ್ಯದಲ್ಲಿ ಮೂರು ವಿಧಾನಗಳನ್ನು ಹೇಳಿರುವಾಗ, ಅವರು ಹೇಳಿದ ಎರಡು ವಿಧಾನಗಳು ಒಂದೇ ಅಂಡಜಗಳಿಗೆ ಸರಿಹೋಗುತ್ತವೆ. ಅವರ ಲೆಕ್ಕದಲ್ಲಿ ಪಿಂಡಜ ಇಲ್ಲದಂತೆ ಹೋಗಿದೆ. ಅದಕ್ಕೆ ನಾನು ಒಪ್ಪಿಕೊಳ್ಳಲಿಲ್ಲ. ಎಷ್ಟೋ ಪ್ರಶ್ನೆಗಳನ್ನು ಹಾಕಿದಾಗ ಅದಕ್ಕೆ ಅವರು ಸಮಾಧಾನ ಹೇಳಲಿಲ್ಲ.

ಮತ್ತೊಬ್ಬರು ಮಾತನಾಡುತ್ತಾ ಹೀಗೆ ವರ್ಣಿಸಿ ಹೇಳಿದ್ದಾರೆ. ಮೊಟ್ಟೆಯಿಂದ ಕೋಳಿಮರಿ ಬರುವುದು ಪ್ರಾಣವಿಲ್ಲದ ಅದರಿಂದ ಪ್ರಾಣ ವಿರುವುದು ಹುಟ್ಟಿಬಂದಂತೆ ಎಂದು ಹೇಳಿ, ಎರಡನೆಯದು ಹೇಗೆ ಹೇಳಿದ್ದಾರೆಂದರೆ ಜೀವವಿರುವ ಅದರಿಂದ ಜೀವ ಇಲ್ಲದಿರುವುದು ಹುಟ್ಟುತ್ತಿರುವುದು ವಾಸ್ತವವೇ. ಜೀವವಿರುವ ಮನುಷ್ಯನಿಂದ ಜೀವವಿಲ್ಲದ ಮಲ ಬರುತ್ತಿದೆಯಲ್ಲವೆ! ಹಾಗೇ ಜೀವವಿರುವ ಶರೀರದಿಂದ ಜೀವವಿಲ್ಲದ ಉಗುಳು, ಮೂತ್ರ, ಬೆವರು ಇವೆಲ್ಲವೂ ಬರುತ್ತಿವೆಯಲ್ಲವೆ! ಎಂದು ಸಮಾಧಾನ ಹೇಳಿದ್ದಾರೆ. ಆತನನ್ನು ಸಹ ಪ್ರಶ್ನೆಗಳು ಕೇಳಿದಾಗ ಕೊನೆಗೆ ಏನೂ ಹೇಳಲಾರದೆ ಹೋಗಿದ್ದಾನೆ. ದೇವರು ಎಷ್ಟೋ ಉನ್ನತವಾದ ತನ್ನ ಜ್ಞಾನವನ್ನು ಧರ್ಮಬದ್ಧವಾಗಿ ಹೇಳಿದರೇ, ಮನುಷ್ಯರು ಅದನ್ನು ಯಾವ ಒಂದು ಸರಿಯಾದ ವಿಧಾನವಾಗಿ ತಿಳಿಯಲಾರದೆ ಹೋಗುತ್ತಿದ್ದಾರೆಂದು ತಿಳಿದುಹೋಗಿದೆ. ದೇವರು 6–95ನೆ ವಾಕ್ಯದಲ್ಲಿ ತನ್ನ ಮೂರು ವಿಧಗಳ ಸೃಷ್ಠಿ ವಿಷಯವನ್ನು ವಾಕ್ಯ ರೂಪದಲ್ಲಿ ಹೇಳಿದರೇ, ಅದು ದೊಡ್ಡ ಜ್ಞಾನ ರಹಸ್ಯವೆಂದು ತಿಳಿಯದೆ ಯಾರಿಗೆ ಇಷ್ಟಬಂದಂತೆ ಅವರು ಅರ್ಥ ಮಾಡಿಕೊಳ್ಳುವುದು ನಡೆದಿದೆ. ಹಾಗೆ ಅರ್ಥ ಮಾಡಿಕೊಂಡವರು ನಮಗೆ ತಿಳಿದಿರುವುದು, ನಮಗೆ ಅರ್ಥವಾಗಿರುವುದು ಸರಿಯಾದ ಜ್ಞಾನವೋ, ಅಲ್ಲವೋ ಎಂದು ಸ್ವಲ್ಪವಾದರೂ ಹಿಂತಿರುಗಿ ನೋಡಿಕೊಳ್ಳುತ್ತಿಲ್ಲ. ಪ್ರತಿ ಒಬ್ಬರು ತಮಗೆ ಅರ್ಥವಾಗಿರುವುದೇ ನಿಜವಾದ

ಜ್ಞಾನವೆಂದು ಅಂದುಕೊಳ್ಳುತ್ತಿದ್ದಾರೆ. ದೇವರ ಸೃಷ್ಠಿ ಭೂಮಿಮೇಲೆ ಮೂರು ವಿಧಗಳಾಗಿ ಇದೆಯೆಂದು ತಿಳಿಸಿದ ವಾಕ್ಯವನ್ನು ಮನುಷ್ಯ ಸರಿಯಾಗಿ ಅರ್ಥಮಾಡಿಕೊಳ್ಳದೆ ಹೋಗುವುದರಿಂದ ಅಲ್ಲಿ ಹೇಳಿದ ಧರ್ಮ ಅಧರ್ಮ ವಾಗಿಯೇ ನಿಂತು ಹೋಗಿದೆ. ಇದು ಒಂದು ಮತಕ್ಕೇ ಪರಿಮಿತಿ ಅಲ್ಲ. ಎಲ್ಲ ಮತಗಳಲ್ಲಿಯೂ ದೇವರು ಹೇಳಿದ ವಾಕ್ಯಗಳು ಧರ್ಮಬದ್ಧವಾಗಿ ಅರ್ಥ ವಾಗುತ್ತಿಲ್ಲ. ಅಷ್ಟೋ ಇಷ್ಟೋ ಜ್ಞಾನಿಗಳೆಂದುಕೊಳ್ಳುವವರಿಗೇ ಅರ್ಥ ವಾಗದಿರುವಾಗ ಉಳಿದ ಪ್ರಜೆಗಳ ವಿಷಯದಲ್ಲಿ ಬೇರೆ ಹೇಳಬೇಕಾದ ಅವಶ್ಯವಿಲ್ಲ.

**30) ಪ್ರ :– ಈದಿನ ಪ್ರತಿ ಮತದಲ್ಲಿಯೂ ಬೋಧಕರು ಅವರ ಗ್ರಂಥಗಳಲ್ಲಿನ ಜ್ಞಾನವನ್ನು ಬೋಧಿಸುತ್ತಿದ್ದಾರಲ್ಲವೆ! ಗ್ರಂಥದಲ್ಲಿನ ಜ್ಞಾನವನ್ನು ಸರಿಯಾಗಿ ತಿಳಿಯದಂತೆ ಬೋಧಿಸುವುದರಿಂದ ಅವರ ಬೋಧನೆಗಳನ್ನು ಕೇಳುವವರೆಲ್ಲರೂ ತಪ್ಪುದಾರಿ ಹಿಡಿದು ಹೋಗುವ ಅವಕಾಶ ಇದೆ ಅಲ್ಲವೆ! ಹಾಗಿರುವಾಗ ದೈವಜ್ಞಾನ ತಿಳಿಯಬೇಕೆನ್ನುವ ಜಿಜ್ಞಾಸೆ ಉಂಟಾದವರಿಗೆ ದೇವರ ಜ್ಞಾನ ಹೇಗೆ ತಿಳಿಯಬಲ್ಲದು? ಅಸಲಾದ ಧರ್ಮಗಳು ಹೇಗೆ ತಿಳಿಯಬಲ್ಲವು?**

**ಉತ್ತರ :–** ಮೊದಲು ಮನುಷ್ಯ ತಾನು ಜ್ಞಾನವನ್ನು ತಿಳಿಯಬೇಕೆನ್ನುವ ಜಿಜ್ಞಾಸೆಯಿಂದ ಇದ್ದರೂ ಅದಕ್ಕೆ ತಕ್ಕಂತೆ ಶ್ರದ್ಧೆ ಹೊಂದಿರಬೇಕು. ಹಾಗೆ ಶ್ರದ್ಧೆ ಇರುವುದರಿಂದ ದೇವರ ಜ್ಞಾನವನ್ನು ಬೋಧಿಸುವ ಬೋಧಕನು ಅಲ್ಲದೆ ಗುರುವೇ ಬಂದು ಜ್ಞಾನ ತಿಳಿಸಿಹೋಗುವನು.

**31) ಪ್ರ :– ಜ್ಞಾನ ಜಿಜ್ಞಾಸೆ ಇರುವವರು ಪೂರ್ತಿ ಶ್ರದ್ಧೆ ಹೊಂದಿದ್ದರೇ ಬೋಧಕರನ್ನು ಮೀರಿದ ಗುರುವು ಬಂದು ಧರ್ಮಗಳೊಂದಿಗೆ ಕೂಡಿಕೊಂಡ ಜ್ಞಾನವನ್ನು ತಿಳಿಸಿದಾಗ ಮನುಷ್ಯ ದೇವರ ಜ್ಞಾನ ತಿಳಿಯಬಲ್ಲನು. ಒಂದು ಕಡೆ ದೈವಗ್ರಂಥದಲ್ಲಿ "ದೇವರ ಜ್ಞಾನವನ್ನು ದೇವರು ಹೊರತು ಯಾವ ಮನುಷ್ಯ ತಿಳಿಸುವುದಿಲ್ಲವೆಂದು, ದೇವರ ಜ್ಞಾನ ಯಾವ ಮನುಷ್ಯನಿಗೂ ತಿಳಿದಿಲ್ಲವೆಂದು, ಇದೆಯಲ್ಲವೇ! ದೈವಗ್ರಂಥದಲ್ಲಿನ ಜ್ಞಾನವನ್ನು ಧರ್ಮಬದ್ಧವಾಗಿ ದೇವರೇ ಹೇಳಬೇಕೇ ಹೊರತು, ಒಬ್ಬ ಮನುಷ್ಯನಾದ ಗುರುವು ಹೇಗೆ ಹೇಳಬಲ್ಲನು? ಮನುಷ್ಯನಾದ ಗುರುವು ಹೇಳುವುದಾದರೇ ದೇವರ**

**ಜ್ಞಾನ ದೇವರಿಗೆ ಹೊರತು ಮನುಷ್ಯರಿಗೆ ತಿಳಿದಿಲ್ಲವೆನ್ನುವ ದೇವರ ಮಾತು ಅಸತ್ಯವಾಗುತ್ತದಲ್ಲವೆ! ಇದಕ್ಕೆ ನೀವೇನನ್ನುತ್ತೀರಾ?**

**ಉತ್ತರ :– "ದೇವರ ಜ್ಞಾನ ದೇವರು ಹೊರತು ಮತ್ಯಾವ ಇತರೆ ಮನುಷ್ಯ ಹೇಳಲಾರನು"** ಎನ್ನುವ ಮಾತು ಶಾಸನ. ಆ ಮಾತನ್ನು ಯಾರೂ ಅತಿಕ್ರಮಿಸಲಾರರು. ಆದರೇ ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ತಿಳಿಸುವ ನಿಮಿತ್ತ ಮನುಷ್ಯನಾಗಿಯೇ ಬರಬೇಕಾಗಿದೆ. ಆದ್ದರಿಂದ ದೇವರು ಮನುಷ್ಯನಾಗಿ ಬಂದಾಗ ಆತನನ್ನು 'ದೇವರು' ಎನ್ನದಂತೆ 'ಗುರುವು' ಎನ್ನುತ್ತಿದ್ದೇವೆ. ದೇವರು ಗುರುವಾಗಿ ಬರಬಹುದು ಆದರೆ, ಮನುಷ್ಯ ಎಂದಿಗೂ ಗುರುವು ಆಗಲಾರನು. ಮನುಷ್ಯನಾಗಿ ಬಂದಿರುವ ದೇವರೇ ಗುರು ಆಗಿರುವುದರಿಂದ ಆತನು ತನ್ನ ಜ್ಞಾನವನ್ನು ಪ್ರಜೆಗಳಿಗೆ ವಿವರವಾಗಿ, ಧರ್ಮಬದ್ಧವಾಗಿ ತಿಳಿಸಬಲ್ಲನು. ಮನುಷ್ಯ ಗುರುವು ಆಗದಿರುವಾಗ, ದೇವರೇ ಗುರುವಾದಾಗ ದೇವರ ಜ್ಞಾನ ದೇವರಿಗೇ ತಿಳಿದಿದೆ ಎನ್ನುವ ಮಾತು ಸತ್ಯವಾದಂತೆ ಅಲ್ಲವೆ! ಆದರೇ ಗುರುವಾಗಿ ಬಂದಿರುವ ದೇವರನ್ನು ಮನುಷ್ಯನ ರೂಪದಲ್ಲಿ ಯಾರೂ ಗುರುತಿಸಲಾರರು. ಆತನು ಗುರುತಿಸಲ್ಪಡುವುದಿಲ್ಲ.

**32) ಪ್ರ :– ಈಗ ನೀವು ಹೇಳುವ ಜ್ಞಾನವೆಲ್ಲಾ ಪ್ರತ್ಯೇಕವಾಗಿದೆ. ಆದರೇ ನೀವು ಹೇಳುವ ವಿಧಾನದ ಪ್ರಕಾರ ಪ್ರತಿ ಮತದಲ್ಲಿಯೂ ಸಂಪೂರ್ಣ ಧರ್ಮಗಳು ಇಲ್ಲದ ಜ್ಞಾನಿಗಳೇ ಇದ್ದಾರೆಂದು ಅರ್ಥವಾಗುತ್ತಿದೆ. ಆದರೂ ಪ್ರತಿ ಮತದಲ್ಲಿಯೂ ಚಿಕ್ಕ ದೊಡ್ಡ ಜ್ಞಾನಿಗಳು ಎಷ್ಟೋ ಇದ್ದಾರೆ. ಸ್ವಲ್ಪ ತಿಳಿದವರಾಗಲೀ, ಹೆಚ್ಚು ತಿಳಿದವರಾಗಲೀ ಅವರಿಷ್ಟಕ್ಕವರು ನಾವು ಸಂಪೂರ್ಣ ಜ್ಞಾನಿಗಳೆಂದು ಪ್ರಕಟಿಸಿ ಕೊಳ್ಳುತ್ತಿದ್ದಾರೆ. ನಮಗೆ ಚೆನ್ನಾಗಿ ತಿಳಿದಿದೆಯೆಂದು ಒಬ್ಬರಿಗೊಬ್ಬರು ವಾದಿಸಿ ಕೊಳ್ಳುತ್ತಿದ್ದಾರೆ. ಅಂತಹ ಸ್ಥಿತಿಯಲ್ಲಿರುವವರು ಇನ್ನೂ ಸ್ವಲ್ಪ ಕಾಲಕ್ಕಾದರೂ ನಿಜವಾದ ಜ್ಞಾನವನ್ನು ತಿಳಿಯಬಲ್ಲರಾ? ಪೂರ್ವದ ಹಾಗೆ ದೇವರ ಜ್ಞಾನ ಎಲ್ಲರಲ್ಲಿ ಹರಡಿ ಎಲ್ಲರೂ ಜ್ಞಾನಿಗಳಾಗಬಲ್ಲರಾ?**

**ಉತ್ತರ :–** ಗತ ಚರಿತ್ರೆಯನ್ನು ಅನುಸರಿಸಿ ಈಗಲೂ ಕೂಡಾ ಜ್ಞಾನ ವಿಷಯದಲ್ಲಿ ಹಾಗೆಯೇ ನಡೆಯುತ್ತದೆಂದು ತಿಳಿಯುತ್ತಿದ್ದೇವೆ. ನಮ್ಮ ಅಂದಾಜಿನ ಪ್ರಕಾರ ಹಿಂದೂ ಮತದಲ್ಲಿನವರು ಸುಮಾರು ಮೂರು ಸಾವಿರ ವರ್ಷಗಳಿಗೆ ಸಂಪೂರ್ಣ ಜ್ಞಾನಿಗಳಾಗಿ (ಪೂರ್ತಿ ಇಂದೂಗಳಾಗಿ) ಬದಲಾಗಬಲ್ಲರೆಂದು ಅಂದು ಕೊಳ್ಳುತ್ತಿದ್ದೇವೆ. ಹಾಗೆಯೇ ಕ್ರೈಸ್ತವ ಸಮಾಜದಲ್ಲಿನವರು ಸುಮಾರು ಆರು ಸಾವಿರ ವರ್ಷಗಳಿಗೆ, ಮುಸ್ಲಿಮ್ ಸಮಾಜದವರು ಆರು ಸಾವಿರದ ಆರುನೂರು ವರ್ಷಗಳಿಗೆ ಪೂರ್ತಿ ಧರ್ಮಗಳು ತಿಳಿದವರಾಗಿ ಬದಲಾಗಬಲ್ಲರು.

**33) ಪ್ರ :– ಎಲ್ಲ ಮತದವರು ಸಂಪೂರ್ಣ ಜ್ಞಾನಿಗಳಾದರೇ ಅಂದಿನ ಸಮಾಜ ಹೇಗಿರಬಲ್ಲದು? ಯಾವ ಮತ ಅಭಿವೃದ್ಧಿ ಹೊಂದಿರುತ್ತದೆ? ಯಾವ ಮತ ಕ್ಷೀಣಿಸಿರುತ್ತದೆ?**

**ಉತ್ತರ :–** ಭೂಮಿಮೇಲೆ ಜ್ಞಾನವಿಲ್ಲದ ಈ ದಿನಗಳಲ್ಲಿ, ಧರ್ಮಗಳು ತಿಳಿಯದಂತೆ ಹೋದ ಇಂದಿನ ಕಾಲದಲ್ಲಿ ದೇವರ ಜ್ಞಾನ ಮೂರು ಮತಗಳಾಗಿ ವಿಭಜಿಸಲ್ಪಟ್ಟಿದೆ. ಇದು ಇಂದಿನ ಪರಿಸ್ಥಿತಿ. ಹಿಂದಿನ ಕಾಲದೊಳಗೆ ಹೋಗಿ ನೋಡಿದರೇ ನಡೆದುಹೋದ ಮೂರು ಯುಗಗಳಲ್ಲಾಗಲೀ ನಂತರ ಕಲಿಯುಗದಲ್ಲಿ ಮೂರು ಸಾವಿರ ವರ್ಷಗಳು ಕಳೆಯುವವರೆಗು ಕ್ರೈಸ್ತ ಮತ ಹುಟ್ಟುವವರೆಗು ಅಂದರೆ 38,91,000 ವರ್ಷಗಳವರೆಗು ಮತಗಳ ಪ್ರಸ್ತಾಪವೇ ಇಲ್ಲದಂತೆ ಇರುತ್ತಿತ್ತು. ಎಲ್ಲಾ ಒಂದೇ ಸಮಾಜವಾಗಿ ಮತವೆನ್ನುವ ಹೆಸರು ಇಲ್ಲದಂತೆ ಜೀವಿಸುತ್ತಿದ್ದರು. ಪೂರ್ವದಿಂದ ಕುಲಗಳು ಇರುತ್ತಿದ್ದವು. ಕುಲಗಳಿಂದಲೇ ಆಗಾಗ ಅಲ್ಲಲ್ಲಿ ಅಜ್ಞಾನಕ್ಕೆ ಬೀಜ ಬೀಳುತ್ತಾ ಬಂದು ಕೊನೆಗೆ ಕಲಿಯುಗದಲ್ಲಿ ಮತಗಳ ಪ್ರಸ್ತಾಪ ಬಂದಿದೆ. ಈ ದಿನ ಭೂಮಿಮೇಲೆ ಹನ್ನೆರಡು ಮತಗಳಿದ್ದರೂ ಅದರಲ್ಲಿ ಇಂದೂ, ಇಸ್ಲಾಮ್, ಕ್ರೈಸ್ತ ಮತಗಳೇ ಮುಖ್ಯವಾದವು. ಪ್ರಸ್ತುತ ಇರುವ ಸ್ಥಿತಿಯಿಂದ ಮೊದಲು ಹಿಂದೂ ಮತದಲ್ಲಿ ಧರ್ಮಗಳು ತಿಳಿದು ಅಲ್ಲಿಂದ ಅವು ಎಲ್ಲ ಮತಗಳಿಗೂ ಹರಡಿ ಹೋಗುತ್ತವೆ. ಕೊನೆಗೆ ಕಾಲಕಳೆಯುತ್ತಿದ್ದಂತೆಲ್ಲ, ವರ್ಷಗಳ ಸಂಖ್ಯೆ ಬೆಳೆಯುತ್ತಿದ್ದಂತೆ ಮತಗಳೆಲ್ಲವೂ ಜ್ಞಾನದ ಕಡೆಗೆ ಹೋಗಬೇಕಾದ್ದೇ! ಕೊನೆಗೆ ಭೂಮಿಮೇಲೆ ಮನುಷ್ಯರೆಲ್ಲರೂ ಜ್ಞಾನಿಗಳಾಗಿ

ಬದಲಾಗುವುದರಿಂದ ದೇವರ ಧರ್ಮಗಳೆಲ್ಲವೂ ಎಲ್ಲರಿಗೂ ತಿಳಿದುಹೋಗಿ ಮಾನವರೆಲ್ಲರೂ ಜ್ಞಾನಿಗಳಾಗಿ ಬದಲಾಗಿಹೋಗುವರು. ಮನುಷ್ಯನಲ್ಲಿ ಜ್ಞಾನ ಸೇರಿಹೋದ ದಿನ ಮನುಷ್ಯನಿಗು ಮನುಷ್ಯನಿಗು ಮಧ್ಯ ಭೇದ ಇಲ್ಲದಂತೆ ಹೋಗುತ್ತದೆ. ಆಗ ಮತಗಳ ಪ್ರಸ್ತಾಪವೇ ಇರುವುದಿಲ್ಲ. ಎಲ್ಲರೂ ಒಂದೇ ಸಮಾಜವಾಗಿ ಬದುಕಬಲ್ಲರು. ಎಲ್ಲರೂ ಒಂದೇ ಜ್ಞಾನದ ಕೆಳಗೆ ಸೇರಿಹೋಗುವು ದರಿಂದ ಭೂಮಂಡಲವೆಲ್ಲವು ಒಂದೇ ದೇವರ ಜ್ಞಾನ ವ್ಯಾಪಿಸಿ ದೇವರು ಸರ್ವವ್ಯಾಪಿ ಎಂದೂ, ಅವ್ಯಯನು ಎಂದೂ ತಿಳಿದುಹೋಗಬಲ್ಲದು. ಆಗ ಗುರುವೊಂದರ ಮಹಿಮೆ ಭೂಮಿಮೇಲೆ ಪ್ರಕಾಶಿಸಬಲ್ಲದು. ಗುರುವು ಎಂದರೇ ಎಲ್ಲರಿಗೂ ಗೌರವ, ಭಯ, ಭಕ್ತಿ ಏರ್ಪಡುತ್ತದೆ. **ಗುರುವೇ ದೇವರೆಂದೂ, ದೇವರೇ ಗುರುವೆಂದೂ ತಿಳಿದುಹೋಗಬಲ್ಲದು.**

**34) ಪ್ರ :– ಹಾಗೆ ಅಷ್ಟು ದೊಡ್ಡ ಬದಲಾವಣೆ ಬರಬೇಕೆಂದರೇ ಇದ್ದಕ್ಕಿದ್ದಂತೆ ಒಂದು ಸಲ ಬರುವುದಿಲ್ಲ ಅಲ್ಲವೆ! ಅದಕ್ಕೆ ಮೊದಲಿನಿಂದಲೇ ಒಂದು ಪ್ರಣಾಳಿಕೆ ಇರುತ್ತದಲ್ಲವೆ! ದೇವರು ಮೂರು ಸಾವಿರ ವರ್ಷಗಳಿಗೆ ಹಿಂದೂಗಳು ಮೊದಲು ಜ್ಞಾನಿಗಳಾಗಿ ಬದಲಾಗುವುದಕ್ಕೆ ಈಗಿನಿಂದ ಫಥಕವನ್ನು ಏರ್ಪಡಿಸಿದ್ದಾನಾ?**

**ಉತ್ತರ :–** ದೇವರ ಪ್ರಣಾಳಿಕೆಯಲ್ಲಿನ ಭಾಗವೇ ಈದಿನ ಹೊರಗೆ ಬಂದ ತ್ರೈತ ಸಿದ್ಧಾಂತವೆಂದು ನಾವು ಅನ್ನುತ್ತಿದ್ದೇವೆ. **"ತ್ರೈತ ಸಿದ್ಧಾಂತ"** ಎನ್ನುತ್ತಲೇ ಕೇಳುವುದಕ್ಕೆ ಕ್ರೈಸ್ತರ ಪ್ರಚಾರದ ಹಾಗೆ ಇರುತ್ತದೆ. ಆದರೇ ಇದು ಒಂದು ಮತಕ್ಕೆ ಸಂಬಂಧಿಸಿರುವುದಲ್ಲ. **ಮತಗಳಿಗೆ ಅತೀತವಾದ ಜ್ಞಾನವನ್ನು ಬೋಧಿಸುವುದೇ "ತ್ರೈತ ಸಿದ್ಧಾಂತ ಜ್ಞಾನ".** ತ್ರೈತ ಸಿದ್ಧಾಂತ ಜ್ಞಾನ ಎಲ್ಲ ಮತದವರಿಗು ಅರ್ಥವಾಗುವುದೇ ಅಲ್ಲದೆ ಪ್ರತಿ ಪ್ರಶ್ನೆಗು ಉತ್ತರವಾಗಿ ಇದೆ. ತ್ರೈತ ಎಂದರೆ ಮೂರು ಎಂದು ಅರ್ಥ. ಮೂರು ಆತ್ಮಗಳ ವಿಷಯ ಮೂರು ಮತಗಳಲ್ಲಿ ಇರುವುದರಿಂದ ಮೂರು ಮತದವರಿಗು "ತ್ರೈತ ಸಿದ್ಧಾಂತ ಜ್ಞಾನ" ತಪ್ಪದೆ ಅವಶ್ಯಕ. ಮೂರು ಮತಗಳಲ್ಲಿನ ಜ್ಞಾನವೆಲ್ಲವೂ ತ್ರೈತ ಸಿದ್ಧಾಂತದೊಂದಿಗೆ ಮುಡಿಪಟ್ಟಿದೆ. ಆದ್ದರಿಂದ ಮೂರು ಸಾವಿರ ವರ್ಷಗಳಿಗೆ ಹಿಂದೂಗಳನ್ನು ಪೂರ್ತಿ ಜ್ಞಾನಿಗಳಾಗಿ ಬದಲಾಯಿಸುವುದಕ್ಕೆ ಈ ದಿನವೇ "ತ್ರೈತ ಸಿದ್ಧಾಂತ

ಜ್ಞಾನ"ವನ್ನು ತೆರೆ ಮೇಲೆಗೆ ತಂದಿದ್ದಾನೆ. ಪ್ರಪಂಚದಲ್ಲಿ ಇಲ್ಲಿಯವರೆಗು ಇಲ್ಲದ ಜ್ಞಾನ, ಪ್ರಪಂಚದಲ್ಲಿ ಯಾರಿಗೂ ತಿಳಿಯದ ಜ್ಞಾನ. ಪ್ರಪಂಚದಲ್ಲಿ ಮೂರು ಮತಗಳಿಗು ಸಂಬಂಧಿಸಿದ ಜ್ಞಾನ, ಈಗ ಹೊರಗೆ ಬರುವುದರಲ್ಲಿನ ಉದ್ದೇಶ ಮೂರು ಸಾವಿರ ವರ್ಷಗಳಿಗೆ ಹಿಂದೂ ಜಾತಿಯನ್ನು ಸಂಪೂರ್ಣ ಜ್ಞಾನಿಗಳಾಗಿ ಬದಲಾಯಿಸುವುದಕ್ಕೇ ಎಂದು ಅರ್ಥವಾಗುತ್ತಿದೆ.

**35) ಪ್ರ :– ನೀವು ಪ್ರತಿಯೊಂದಕ್ಕೂ ಶಾಸ್ತ್ರಬದ್ಧತೆ ಅವಶ್ಯಕವೆಂದು ಹೇಳುತ್ತಿರುತ್ತೀರ. ಆದರೇ ಈಗ ನೀವು ಹೇಳುವ ಈ ಮಾತಿಗೆ ಶಾಸ್ತ್ರವನ್ನು ಆಧಾರವಾಗಿ ತೋರಿಸಬಲ್ಲಿರಾ?**

**ಉತ್ತರ :–** ಮನುಷ್ಯರು ಯಾವುದು ಹೇಳಿದರೂ ಶಾಸ್ತ್ರಾಧಾರವಿರಬೇಕು. ದೇವರು ಹೇಳುವುದಕ್ಕೆ ಶಾಸ್ತ್ರಾಧಾರ ಇರುವುದಿಲ್ಲ. **ದೇವರು ಹೇಳುವುದು ಶಾಸ್ತ್ರ. ದೇವರು ಹೇಳಿದ ನಂತರ ಅದು ಮನುಷ್ಯರಿಗೆ ಶಾಸ್ತ್ರಾಧಾರವಾಗಿ ಇರುತ್ತದೆ.** ಭಗವದ್ಗೀತೆಯನ್ನು ಶ್ರೀಕೃಷ್ಣನು ಹೇಳಿದಾಗ ಆತನು ಹೇಳಿದ ಜ್ಞಾನ ಹೊಸದಾಗಿ ಇದೆ. ಆತನು ಹೇಳಿದ ಮಾತನ್ನು ಅದಕ್ಕೂ ಮೊದಲು ಯಾವ ಶಾಸ್ತ್ರದಲ್ಲಿ ಹೇಳಿರಲಿಲ್ಲ. ಆದ್ದರಿಂದ ಆತನ ಮಾತಿಗೆ ಶಾಸ್ತ್ರಧಾರವಿರುವುದಿಲ್ಲವೆಂದು, ಆತನ ಮಾತೇ ಶಾಸ್ತ್ರವಾಗುವುದರಿಂದ ಅದೇ ಮುಂಬರುವ ಪೀಳಿಗೆಗೆ ಶಾಸ್ತ್ರಾಧಾರವೆಂದು ಹೇಳಬಹುದು. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ **"ಕ್ಷರ, ಅಕ್ಷರ, ಪುರುಷೋತ್ತಮ"** ಎನ್ನುವ ಮೂವರು ಪುರುಷರನ್ನು ಕುರಿತು ಭಗವಂತನಾದ ಕೃಷ್ಣನು ಹೇಳಿದಾಗ ಆ ಮಾತನ್ನು ಅದಕ್ಕೂ ಮೊದಲು ಯಾರೂ ಹೇಳದೆ ಇರುವುದರಿಂದ ಅದಕ್ಕೆ ಮೊದಲು ಹೇಳಿದ ಆಧಾರವನ್ನು ತೋರಿಸಲಾರೆವು. ನಂತರ ಎಲ್ಲಾದರೂ ಆತ್ಮಗಳ ಜ್ಞಾನ ಹೇಳಿದಾಗ ಕೃಷ್ಣನು ಹೇಳಿದ ಮಾತು ಆಧಾರವಾಗುತ್ತಿದೆ. ಕೃಷ್ಣನು ಭಗವದ್ಗೀತೆಯನ್ನು ಹೇಳಿದ ಮೂರು ಸಾವಿರ ವರ್ಷಗಳ ನಂತರ ಇಜ್ರಾಯೇಲ್ ದೇಶದಲ್ಲಿ ಹುಟ್ಟಿದ ಯೇಸು ಮೂರು ಆತ್ಮಗಳನ್ನು ಕುರಿತು ತನ್ನ ಜ್ಞಾನದಲ್ಲಿ ಹೇಳುವುದು ನಡೆದಿದೆ. ನಂತರ ಆರುನೂರು ವರ್ಷಗಳಿಗೆ ಜಿಬ್ರಯೇಲ್ ಎನ್ನುವ ಆಕಾಶ ಗ್ರಹ ಮುಹಮ್ಮದ್ ಪ್ರವಕ್ತರವರಿಗೆ ಜ್ಞಾನವನ್ನು ಹೇಳಿದಾಗ ಮೂರು ಆತ್ಮಗಳ

ವಿಷಯವನ್ನು ಹೇಳಬೇಕಾಗಿ ಬಂದಿದೆ, ಹಾಗೆಯೇ ಹೇಳುವುದಾಗಿದೆ. ನಂತರ ತಯಾರಾದ ಖುರಾನ್ ಗ್ರಂಥದಲ್ಲಿ "ಖುರಾನ್‌ಗು, ಬೈಬಲ್‌ಗು (ಇಂಜೀಲ್‌ಗು) ತೌರಾತ್ ಗ್ರಂಥವೇ ಆಧಾರ"ವೆಂದು ಭಗವದ್ಗೀತೆಯನ್ನು ಕುರಿತು ಹೇಳಿದ್ದಾರೆ. ತೌರಾತ್ ಗ್ರಂಥವೆಂದರೇ ಭಗವದ್ಗೀತೆಯೆಂದು ತಿಳಿಯಬೇಕು. ತೌರಾತ್ ಗ್ರಂಥದಲ್ಲಿನ ಜ್ಞಾನವನ್ನೇ ಖುರಾನ್ ಗ್ರಂಥ ಧೃಢೀಕರಿಸುತ್ತಿದೆಯೆಂದು **(5–43, 5–44, 5–46, 5–48, 5–68, 62–5) ಖುರಾನ್ ವಾಕ್ಯಗಳಲ್ಲಿ ಭಗವದ್ಗೀತೆಯನ್ನು ಕುರಿತು ಸಾಕ್ಷ್ಯವಿದೆ.** ಭಗವದ್ಗೀತೆಯನ್ನು ಆಧಾರವಾಗಿ ತೋರಿಸುತ್ತಿರುವ ವಾಕ್ಯಗಳು ಇವೆ.

ಮೊದಲು ಕೃಷ್ಣನು ಜ್ಞಾನವನ್ನು ಹೇಳಿದಾಗ ತನ್ನ ಜ್ಞಾನ ಇಂತಹ ಗ್ರಂಥದಲ್ಲಿ ಇದೆಯೆಂದು ಎಲ್ಲೂ ಹೇಳಲಿಲ್ಲ. ಏಕೆಂದರೇ! ಆತನು ಹೇಳಿರುವುದೇ ಎಲ್ಲರಿಗೂ ಶಾಸ್ತ್ರವಾಗಿದೆ. ಅದಕ್ಕೂ ಮೊದಲು ಯಾರಿಗೂ ತಿಳಿಯದ ಶಾಸ್ತ್ರವನ್ನು ಆತನು ಹೇಳುತ್ತಿದ್ದಾನೆ ಆದ್ದರಿಂದ ಅದಕ್ಕೆ ಆಧಾರವಿಲ್ಲ. ಒಬ್ಬ ಪರಿಶೋಧಕನು ಅಥವಾ ಶಾಸ್ತ್ರಜ್ಞ ಒಂದು ಸಿದ್ಧಾಂತವನ್ನು ಕಂಡುಕೊಂಡು ಅದನ್ನು ಭೂಮಿಮೇಲೆ ಜಾರಿ ಮಾಡಿದಾಗ ಆಗ ಅದು ಹೊಸದಾಗಿ ಕಾಣಿಸುತ್ತದೆ. ಆಗಿನಿಂದ ಎಲ್ಲರಿಗೂ ಆ ಸಿದ್ಧಾಂತ ಆಧಾರವಾಗುತ್ತದೆ. ಗತದಲ್ಲಿ ಯಾವಾಗ ಎಲ್ಲೂ ಇಲ್ಲದ ರೇಡಿಯೋವನ್ನು, ಟೀ.ವೀಯನ್ನು ಮೊದಲು ಪರಿಶೋಧಕನು ಕಂಡುಹಿಡಿದ ನಂತರ ಅದೇ ಸೂತ್ರವನ್ನು ಆಧಾರ ಮಾಡಿಕೊಂಡು ಉಳಿದವರು ಅದನ್ನು ತಯಾರು ಮಾಡುವುದಾಗಿದೆ. ಹಾಗೆಯೇ ಮೊದಲು ಕಂಡುಕೊಳ್ಳುವ ಶಾಸ್ತ್ರಕ್ಕೆ ಆಧಾರವಿರುವುದಿಲ್ಲ. ನಂತರ ಅದೇ ಎಲ್ಲರಿಗೂ ಆಧಾರವಾಗುತ್ತದೆ. ಅದೇ ವಿಧವಾಗಿ ಮೊದಲು ಹೇಳಲ್ಪಡುವ ಜ್ಞಾನಕ್ಕೆ ಆಧಾರವಿರುವುದಿಲ್ಲ. ನಂತರ ಅದು ಎಲ್ಲರಿಗೂ ಆಧಾರವಾಗುತ್ತದೆ. ಮೊದಲು ದ್ವಾಪರ ಯುಗದಲ್ಲಿ ಕೃಷ್ಣನು ಹೇಳಿದ ಮೂರು ಆತ್ಮಗಳಿಗೆ ಶಾಸ್ತ್ರಾಧಾರವಿಲ್ಲ. ಆ ನಂತರ ಕಲಿಯುಗದಲ್ಲಿ ಬಂದಿರುವ ಬೈಬಲ್‌ಗೆ, ಖುರಾನ್ ಗ್ರಂಥಕ್ಕೆ ಅದು ಸಾಕ್ಷ್ಯಾಧಾರವಾಗಿದೆ. ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿರುವ **"ತಂದೆ, ಕುಮಾರನು, ಪರಿಶುದ್ಧಾತ್ಮ"** ಎನ್ನುವ ಮೂರು ಆತ್ಮಗಳಿಗೆ ಭಗವದ್ಗೀತೆ

ಯಲ್ಲಿನ **"ಕ್ಷರ, ಅಕ್ಷರ, ಪುರುಷೋತ್ತಮ"** ಎನ್ನುವ ಮಾತು ಆಧಾರವಾಗಿದೆ, ಬ್ರಹ್ಮವಿದ್ಯೆ ಶಾಸ್ತ್ರಬದ್ಧವಾದುದು. ಹಾಗೆಯೇ ಅಂತಿಮ ದೈವಗ್ರಂಥವೆಂದು ಹೆಸರುವಾಸಿಯಾದ ಖುರಾನ್ ಗ್ರಂಥದಲ್ಲಿ 50ನೇ ಸೂರಾ, 21ನೇ ಆಯತ್‌ನಲ್ಲಿ ಹೇಳಿದ **"ನಡೆಸುವವನು, ನಡೆಸಲ್ಪಡುವವನು, ಸಾಕ್ಷಿಯಾಗಿ ನೋಡುವವನು"** ಎಂದು ಹೇಳಲ್ಪಟ್ಟ ಮೂರು ಆತ್ಮಗಳಿಗೆ ಭಗವದ್ಗೀತೆಯೇ ಆಧಾರವೆಂದು ಖುರಾನ್ ಹೇಳುತ್ತಿದೆ.

**36) ಪ್ರ :– ಈ ದಿನ ಮನುಷ್ಯರು ಯಾರ ಮತದಲ್ಲಿನ ಮಾತನ್ನು ಅವರು ನಂಬುತ್ತಾರೆ. ನಿಮ್ಮ ಮಾತನ್ನು ನಂಬುವುದಿಲ್ಲ ಅಲ್ಲವೆ!**

**ಉತ್ತರ :–** ಅವರ ಮತದಲ್ಲಿನ ಮಾತು ಎಂದರೆ ಅವರ ಗ್ರಂಥದಲ್ಲಿನ ಮಾತನ್ನು ಅವರು ನಂಬುವುದೇ ಒಳ್ಳೆಯದೆಂದು ನಾವು ಕೂಡಾ ಹೇಳುತ್ತಿದ್ದೇವಲ್ಲವೆ! ಅವರ ಗ್ರಂಥದಲ್ಲಿನ ಮಾತೇ ನಮ್ಮ ಮಾತು ಆಗಿರುವುದರಿಂದ ವ್ಯತ್ಯಾಸ ಏನೂ ಇಲ್ಲ. ಯಾರ ಗ್ರಂಥದಲ್ಲಿನ ಜ್ಞಾನಕ್ಕೆ ಅವರು ಅಭ್ಯಾಸವಾಗುವುದರಲ್ಲಿ ತಪ್ಪಿಲ್ಲ. ಆದರೇ ಗುಡಿಯಲ್ಲಿ ದೇವರಿಗು ಮನುಷ್ಯನಿಗು ಮಧ್ಯದಲ್ಲಿ ಪೂಜಾರಿಗಳು ಇರುವಂತೆ ದೈವಗ್ರಂಥದಲ್ಲಿನ ಜ್ಞಾನಕ್ಕೂ ಮನುಷ್ಯನಿಗು ಮಧ್ಯದಲ್ಲಿ ಸ್ವಾಮೀಜಿಗಳು, ಮತ ಹಿರಿಯರು, ಮತ ಗುರುಗಳು ಎನ್ನುವವರು ಅಡ್ಡವಾಗಿದ್ದು ಅವರ ಮಾತುಗಳನ್ನೇ ಪ್ರಜೆಗಳಿಗೆ ಹೇಳುತ್ತಿರುವರು. ಅವರ ಮಾತುಗಳನ್ನು ಕೇಳುವುದಕ್ಕೆ ಮನುಷ್ಯರು ಹುಟ್ಟಲಿಲ್ಲ. ದೈವಗ್ರಂಥದಲ್ಲಿನ ಜ್ಞಾನವನ್ನು ತಿಳಿದುಕೊಂಡು ಅದನ್ನು ಅನುಸರಿಸುವುದಕ್ಕೆ ಪ್ರಜೆಗಳು ಹುಟ್ಟಿದ್ದಾರೆ. ಇಂದಿಗಾದರೂ ಎಚ್ಚರಗೊಂಡು ಮತ ನಿಯಮಗಳಿಂದ ಹೊರಬಿದ್ದು ದೈವಗ್ರಂಥದಲ್ಲಿನ ಮಾತುಗಳನ್ನು ಕೇಳಿರಿ. ಮತ ಹಿರಿಯರೆನ್ನುವವರು ಮತದಲ್ಲಿರುವವರ ಕಣ್ಣಿಗೆ ಬಟ್ಟೆ ಕಟ್ಟಿ ನಡೆಸಿದಂತೆ ಮತ ನಿಯಮಗಳೆನ್ನುವ ಬಟ್ಟೆಕಟ್ಟಿ ಕುರುಡಾಗಿ ನಡೆಸುತ್ತಿದ್ದಾರೆ. ಅವರಿಗೆ ದೇವರು ಕೊಟ್ಟಿರುವ ಗ್ರಂಥದಲ್ಲಿನ ಜ್ಞಾನವನ್ನು ತಿಳಿಯದಂತೆ ಮಾಡುತ್ತಿದ್ದಾರೆ. ಯಾರಾದರೂ ದೈವಗ್ರಂಥದಲ್ಲಿನ ಜ್ಞಾನವನ್ನು ತಿಳಿಯಬೇಕೆಂದು ಪ್ರಯತ್ನಿಸಿದರೇ ಅವರಿಗೆ ಗ್ರಂಥದಲ್ಲಿನ ವಾಕ್ಯಗಳಿಗೆ ತಪ್ಪು ಭಾವನೆಯನ್ನು ಜೋಡಿಸಿ ಹೇಳುತ್ತಿದ್ದಾರೆ. ಅವರು ಹೇಳಿರುವುದೇ ನಿಜವಾದ ಜ್ಞಾನವೆಂದು ಅನ್ನುತ್ತಿದ್ದಾರೆ. ಹಾಗೆ ಮತ

ನಿಯಮಗಳಲ್ಲಿ ಸಿಲುಕಿಕೊಳ್ಳದೇ ನಿಮಗೆ ದೇವರು ಕೊಟ್ಟಿರುವ ಗ್ರಂಥದಲ್ಲಿನ ಜ್ಞಾನವನ್ನು ತಿಳಿಯಿರಿ.

**37) ಪ್ರ :-** ನೀವು ಹೇಳಿದಂತೆ ಮತ ನಿಯಮಗಳನ್ನು ಪಕ್ಕದಲ್ಲಿಟ್ಟು ನಮಗೆ ದೇವರುಕೊಟ್ಟಿರುವ ನಮಗಾಗಿ ದೇವರು ಅವತರಿಸುವಂತೆ ಮಾಡಿದ ದೈವಗ್ರಂಥವನ್ನು ನಾವು ನೋಡುವುದು ನಡೆದಿದೆ. ಅದರಲ್ಲಿ ನಾವು ತೆಗೆದುನೋಡಿದ ಅಧ್ಯಾಯದಲ್ಲಿ ನೀವು ವ್ಯಭಿಚಾರಿಗಳ ಕಡೆ ಹೀಗೆ ಪ್ರವರ್ತಿಸಿರಿ, ವ್ಯಭಿಚಾರಿಗಳನ್ನು ಛಡಿ ಹೊಡತೆಗಳೊಂದಿಗೆ ಶಿಕ್ಷಿಸಿರಿ. ಹೆಂಡತಿಯ ರೊಂದಿಗೆ ಹೀಗೆ ಸಂಸಾರ ಮಾಡಿರಿ. ಹೆಂಡತಿಯರನ್ನು ಬಿಟ್ಟರೆ ಅವರಿಗೆ ಪರಿಹಾರವಾಗಿ ಇದನ್ನು ಕೊಡಿ. ನೀವು ಹೆಂಡತಿಯರನ್ನು ಬಿಟ್ಟು ಇತರರ ಹತ್ತಿರಕ್ಕೆ ಹೋಗಬೇಡಿ, ನಿಮ್ಮ ಹೆಂಡತಿಯರು ನಿಮ್ಮನ್ನು ಮೋಸ ಮಾಡಿದರೇ ಹೀಗೆ ಮಾಡಿರಿ" ಎಂದು ಒಟ್ಟಾರೆ ಪ್ರಪಂಚ ವಿಷಯಗಳೇ ಆ ಅಧ್ಯಾಯವೆಲ್ಲಾ ಇವೆ. ಅದನ್ನು ನೋಡಿದ ನಾವು ಸ್ವಲ್ಪ ಆಶ್ಚರ್ಯಪಟ್ಟು ದೈವಗ್ರಂಥದಲ್ಲಿ ಎಲ್ಲಾ ಪ್ರಪಂಚ ವಿಷಯಗಳಿವೆಯೇ! ಎಂದುಕೊಂಡು ನಂತರ ಬೇರೊಂದು ಅಧ್ಯಾಯವನ್ನು ತೆರೆದು ನೋಡಿದೆವು. ಅಲ್ಲಿಯೂ ಅಂತಹ ವಿಷಯವೇ ಕಾಣಿಸಿತು. ಇಲ್ಲೇನೋ ಹೆಂಗಸರ ವ್ಯಭಿಚಾರ, ಅಲ್ಲೇನೋ ಗಂಡಸರ ವ್ಯಭಿಚಾರವಿದೆ. "ನೀವು ಗಂಡಸ ರೊಂದಿಗೆ ನಿಮ್ಮ ಕೋರಿಕೆಗಳನ್ನು ಈಡೇರಿಸಿ ಕೊಳ್ಳಬೇಡಿ. ನಿಮ್ಮ ಹೆಂಡತಿಯರೊಂದಿಗೇ ಕೋರಿಕೆಗಳು ಈಡೇರಿಸಿಕೊಳ್ಳಿ" ಎಂದು ಬರೆಯುವುದು ನಡೆದಿದೆ. ಇವೆಲ್ಲವೂ ಪ್ರಪಂಚ ವಿಷಯಗಳು ಕರ್ಮವನ್ನನುಸರಿಸಿ ನಡೆಯುವವೆಂದು ಭಗವದ್ಗೀತೆಯಲ್ಲಿ ಇದೆ. ಅದೇ ವಿಷಯವೇ ಉಳಿದ ಗ್ರಂಥಗಳಲ್ಲಿ ಕೂಡಾ ಇದೆ. ಅವುಗಳನ್ನು ಕುರಿತು ಹೇಳುವುದನ್ನು ನೀತಿ ಎನ್ನುತ್ತೇವೆ. ನೀತಿ ಪ್ರಪಂಚ ಸಂಬಂಧವಾಗಿರುವುದೆಂದು ನೀವು ಬಹಳ ಸಲ ಹೇಳಿದ್ದೀರ. ದೇವ ಗ್ರಂಥದಲ್ಲಿ ದೈವಸಂಬಂಧವಾದ ಜ್ಞಾನವಿರಬೇಕು ಆದರೆ, ಪ್ರಪಂಚ ಸಂಬಂಧ ನೀತಿ ಏಕೆ ಇದೆಯೋ ನೀವೇ ಹೇಳಬೇಕು. ಪ್ರಪಂಚ ಸಂಬಂಧ ವಿಷಯಗಳಲ್ಲಿ ಕೂಡಾ ನೀಚವಾದ ವಿಷಯಗಳನ್ನು ಏಕೆ ಬರೆದಿದ್ದಾರೋ? ಈ ವಿಷಯಗಳನ್ನು ಮಹಾಜ್ಞಾನಿಗಳಾದವರು ಹೇಳಿರುತ್ತಾರಾ! ಎಂದು ಅನುಮಾನ ಬರುತ್ತಿದೆ. ಇವೆಲ್ಲಾ ನೋಡಿದ ನಂತರ ದೈವಗ್ರಂಥಗಳನ್ನು ಅವುಗಳಲ್ಲಿ ಇರುವುದೆಲ್ಲಾ ಜ್ಞಾನವೇನಾ? ದೈವಸಂಬಂಧ ವಿಷಯಗಳೇನಾ? ಎಂದು ಕೇಳುತ್ತಿದ್ದೇನೆ. ಇದಕ್ಕೆ ನೀವೇನನ್ನುತ್ತೀರಾ?

**ಉತ್ತರ :–** ದೈವಗ್ರಂಥಗಳಲ್ಲಿ ದೈವಜ್ಞಾನವೇ ಇರಬೇಕು. ಆದರೇ ದೈವಜ್ಞಾನವಲ್ಲದ ವಿಷಯಗಳು ಮನುಷ್ಯನಿಗೆ ಅವಶ್ಯಕವಿಲ್ಲದ ವಿಷಯಗಳು ಸಹ ಇವೆ. ಚಿಕ್ಕ ಉದಾಹರಣೆಯನ್ನು ನೋಡಿರಿ. ಒಬ್ಬನು ಬಜಾರಿಗೆ ಹೋಗಿ ಅಕ್ಕಿ ಅಂಗಡಿಯಲ್ಲಿ ಒಂದು ಮೂಟೆ ಅಕ್ಕಿಯನ್ನು ಕೊಂಡು ಮನೆಗೆ ತಂದುಕೊಂಡಿದ್ದಾನೆ. ಮರುದಿನ ಅಡಿಗೆ ಮಾಡಿ ತಿನ್ನಬೇಕೆಂದು ಅಕ್ಕಿ ಮೂಟೆಯನ್ನು ಬಿಚ್ಚಿದಾಗ, ಅದರಲ್ಲಿ ನಮಗೆ ಅವಶ್ಯಕವಿಲ್ಲದವು, ನಾವು ತಿನ್ನಬಾರದವು ಬಹಳ ಇದ್ದಂತೆ ತಿಳಿದಿದೆ. ಮೇಲೆ ಮೂಟೆಯ ಮೇಲೆ ಹೆಸರನ್ನು ನೋಡಿದರೇ (Ready For Cook) ಎಂದು ಬರೆದಿದೆ. 'ಅಡಿಗೆ ಮಾಡುವುದಕ್ಕೆ ಸಿದ್ಧವಾಗಿವೆ" ಎಂದು ಮೂಟೆ ಮೇಲೆ ಬರೆದರೂ, ಮೂಟೆ ತೆರೆದು ನೋಡಿದರೇ ಅವು ತಿನ್ನುವುದಕ್ಕೆ ಸಿದ್ಧವಾಗಿ ಇಲ್ಲವೆಂದು ತಿಳಿದುಹೋಗಿದೆ. ಅದರಲ್ಲಿ ಕಲ್ಲುಗಳಿವೆ, ಅಲ್ಲಲ್ಲಿ ಮಣ್ಣಿನ ಎಂಡೆಗಳಿವೆ. ಇನ್ನೂ ಬತ್ತದ ಕಾಳುಗಳಿವೆ, ಅಕ್ಕಿಯೊಂದಿಗೆ ಅಕ್ಕಿ ನುಚ್ಚು ಸಹ ಇದೆ. ಅಕ್ಕಿಯನ್ನು ಹಿಡಿದುಕೊಂಡು ನೋಡಿದರೆ ಕೈಗೆ ಸ್ವಲ್ಪ ಹೊಟ್ಟು ಕೂಡಾ ಅಂಟಿಕೊಂಡಿದೆ. ನಾವು ನಮ್ಮ ಉದ್ದೇಶ ಪೂರ್ವಕವಾಗಿ ಅಕ್ಕಿಯನ್ನು ಕೊಂಡಿದ್ದೇವೆ. ಆದರೇ ಅಕ್ಕಿಯೊಂದಿಗೆ ಅಕ್ಕಿ ಮೂಟೆಯಲ್ಲಿ 1) ಕಲ್ಲು, 2) ಮಣ್ಣಿನ ಎಂಡೆಗಳು, 3) ಬತ್ತದ ಕಾಳುಗಳು, 4) ನುಚ್ಚು, 5) ಹೊಟ್ಟು ಹೀಗೆ ಅಕ್ಕಿ ಅಲ್ಲದ ಐದು ವಸ್ತುಗಳು ಅದರಲ್ಲಿ ಬೆರೆತಿವೆ. ಆಗ ಆತನು ತನ್ನ ಆಹಾರಕ್ಕಾಗಿ ಶುಭ್ರವಾದ ಅನ್ನಕ್ಕೋಸ್ಕರ ಅಕ್ಕಿ ಅಲ್ಲದ ಐದು ವಸ್ತುಗಳನ್ನು ಅಕ್ಕಿಯಿಂದ ಬೇರ್ಪಡಿಸಿ, ಅಕ್ಕಿಯನ್ನು ಮಾತ್ರ ಪಕ್ಕಕ್ಕೆ ತೆಗೆದುಕೊಳ್ಳುವುದು ನಡೆದಿದೆ. ಕೊಂಡಾಗ ಅಕ್ಕಿಯ ಮೂಟೆ ನೂರು ಕೇಜಿಗಳಿರುವಾಗ, ಅಕ್ಕಿಯ ಮೂಟೆಯನ್ನು ಶುಭ್ರಪಡಿಸಿ ಅದರಲ್ಲಿನ ಅಕ್ಕಿ ಅಲ್ಲದ ಐದು ವಸ್ತುಗಳನ್ನು ತೆಗೆದುಹಾಕಿದಾಗ ನಂತರ ನಿಖರ ಅಕ್ಕಿಯ ಭಾರ 90 ಕೇಜಿಗಳೇ ಬಂದಿದೆ. ಸುಮಾರು ಹತ್ತು ಕೇಜಿಗಳ ವೃಥಾ ಪದಾರ್ಥಗಳು ಅದರಿಂದ ಹೊರಗೆ ಹೋಗಿವೆ. ಈ ವಿಧವಾಗಿ ಬಜಾರಿನಿಂದ ಮೂಟೆ ಅಕ್ಕಿಯನ್ನು ತಂದುಕೊಂಡು ಶುಭ್ರಪಡಿಸಿಕೊಂಡು ತಿನ್ನಬೇಕಾಗಿ ಬಂದಿದೆ. ಅಕ್ಕಿಯ ಮೂಟೆಯನ್ನು ತಂದುಕೊಂಡರೂ ಅವು ಹಾಗೆಯೇ ತಿನ್ನುವುದಕ್ಕೆ ಉಪಯೋಗಪಡಲಿಲ್ಲ.

ನಾವು ಉದ್ದೇಶಪೂರ್ವಕವಾಗಿ ಅಕ್ಕಿಯ ಅನ್ನವನ್ನು ತಿನ್ನಬೇಕೆಂದು ಅಕ್ಕಿಯ ಮೂಟೆಯನ್ನು ಹಣದಿಂದ ಕೊಂಡು ತಂದು ನೋಡಿದರೂ, ಅದು ಹಾಗೆಯೇ ತಿನ್ನುವುದಕ್ಕೆ ಹೇಗೆ ಉಪಯೋಗಪಡಲಿಲ್ಲವೋ, ಅದರಲ್ಲಿ ಅಕ್ಕಿ ಅಲ್ಲದ ಐದು ವಸ್ತುಗಳು ಅಕ್ಕಿಯೊಂದಿಗೆ ಹೇಗೆ ಸೇರಿವೆಯೋ, ಅದೇ ವಿಧವಾಗಿ ನಾವು ದೈವ ಜ್ಞಾನವನ್ನು ತಿಳಿಯಬೇಕೆಂಬ ಉದ್ದೇಶದಿಂದ ಹಣ ಕೊಟ್ಟು ಗ್ರಂಥವನ್ನು ತಂದುಕೊಂಡು ನೋಡಿದರೇ, ಅದರಲ್ಲಿ ನಮಗೆ ಉಪಯೋಗವಾಗದ ಪ್ರಪಂಚ ಸಂಬಂಧ ಐದು ವಿಷಯಗಳು ಇದ್ದಂತೆ ತಿಳಿದಿದೆ. ಅಕ್ಕಿಯಲ್ಲಿ ಬೆರೆತ ಅಕ್ಕಿ ಅಲ್ಲದ ಐದು ವಸ್ತುಗಳನ್ನು ಹೇಗೆ ತೆಗೆದುಹಾಕಿ ಅಕ್ಕಿಯನ್ನು ಉಪಯೋಗಿಸಿ ಕೊಂಡಿದ್ದೇವೋ, ಹಾಗೆಯೇ ದೈವಗ್ರಂಥದಲ್ಲಿ ಬೆರೆತ ಪ್ರಪಂಚ ಸಂಬಂಧ ಐದು ವಿಷಯಗಳನ್ನು ತೆಗೆದುಹಾಕಿ ಸ್ವಚ್ಛವಾದ ಜ್ಞಾನವನ್ನೇ ಉಪಯೋಗಿಸಿ ಕೊಳ್ಳಬೇಕು. ಅಂಗಡಿಯಿಂದ ತಂದುಕೊಂಡ ಅಕ್ಕಿಯ ಮೂಟೆಯಹಾಗೆ ಈದಿನ ದೈವಗ್ರಂಥಗಳು ಇವೆಯೆಂದು ಅರ್ಥವಾಗುತ್ತಿದೆ. ನೀವು ದೈವಗ್ರಂಥದಲ್ಲಿ ನೋಡಿರುವುದು ಕೂಡಾ ಅಷ್ಟೇ. ಹೊಲದಲ್ಲಿ ಬೆಳೆದಿರುವುದು ಸ್ವಚ್ಛವಾದ ಅಕ್ಕಿಯೇ, ಆದರೇ ಅವು ಮನುಷ್ಯನ ಹತ್ತಿರಕ್ಕೆ ಬರುವಷ್ಟರಲ್ಲಿ ಹೇಗೆ ಅದರಲ್ಲಿ ಬೆಳೆಯದ ಪಕ್ಕದ ವಸ್ತುಗಳು ಸೇರಿವೆಯೋ, ಹಾಗೆಯೇ ಮೊದಲು ದೇವರು ಹೇಳಿದ ಜ್ಞಾನ ಸ್ವಚ್ಛವಾಗಿರುವುದೇ ಇರುತ್ತದೆ. ಅದು ಗ್ರಂಥ ರೂಪದಲ್ಲಿ ಮನುಷ್ಯನ ಹತ್ತಿರಕ್ಕೆ ಬರುವಷ್ಟರಲ್ಲಿ ಅದರಲ್ಲಿ ಎಷ್ಟೋ ಅಜ್ಞಾನ ವಿಷಯಗಳು ಸಹ ಸೇರಿಹೋಗುತ್ತಿವೆ. ಆದ್ದರಿಂದ ಈದಿನ ಪ್ರತಿ ದೈವಗ್ರಂಥದಲ್ಲಿಯೂ ಸ್ವಲ್ಪವಾದರೂ ಕಲುಷಿತ ಜ್ಞಾನವಿರುತ್ತದೆ. ಕಲುಷಿತ ಜ್ಞಾನವನ್ನು ದೇವರು ಹೇಳಲಿಲ್ಲ ಆದರೇ, ಮನುಷ್ಯರ ಪ್ರಭಾವದಿಂದ ಮಧ್ಯದಲ್ಲಿ ಮನುಷ್ಯರ ಜೋಕ್ಯದಿಂದ ದೈವಗ್ರಂಥದಲ್ಲಿ ದೈವಜ್ಞಾನ ಅಲ್ಲದಿರುವಂತಹವು, ಪ್ರಪಂಚ ಸಂಬಂಧವಾಗಿರುವಂತಹವು ಆದ ಐದು ವಿಷಯಗಳು ದೈವ ಗ್ರಂಥಗಳಲ್ಲಿ ಸೇರಿಹೋಗಿವೆ. ಹಾಗೆ ಸೇರಿದ ವಿಷಯಗಳನ್ನು ನೀನು ನೋಡಿ ಇವೇನು ಅಕ್ಕಿ! ಎಂದಂತೆ, ಇದೇನು ಜ್ಞಾನ! ಎಂದು ಕೇಳುತ್ತಿದ್ದೀಯ. ಕಲುಷಿತ ಅಕ್ಕಿಯಿಂದ ಸ್ವಚ್ಛವಾದ ಅಕ್ಕಿಯನ್ನು ಹೊರಗೆ ತೆಗೆದುಕೊಳ್ಳುವುದಕ್ಕೆ, ಅಕ್ಕಿಯಲ್ಲಿನ ಕಲುಷಿತವನ್ನು

ಹೊರಗೆ ತೆಗೆದು ಹಾಕುವುದಕ್ಕೆ ಹೇಗೆ ಮೊರ, ಜರಡಿಯನ್ನು ಉಪಯೋಗಿಸುತ್ತಿದ್ದೇವೋ, ಹಾಗೆಯೇ ಗ್ರಂಥದಲ್ಲಿನ ಸ್ವಚ್ಛವಾದ ಜ್ಞಾನವನ್ನು ಗ್ರಹಿಸುವುದಕ್ಕೆ, ಅದರಲ್ಲಿನ ಪ್ರಪಂಚ ವಿಷಯಗಳನ್ನು ಬೇರೆ ಮಾಡುವುದಕ್ಕೆ ನಮ್ಮಲ್ಲಿರುವ ಬುದ್ಧಿಯನ್ನು, ಶ್ರದ್ಧೆಯನ್ನು ಉಪಯೋಗಿಸಬೇಕು. ಮೊರ, ಜರಡಿಗಳನ್ನು ಉಪಯೋಗಿಸಿದರೇ ಸ್ವಚ್ಛವಾದ ಅಕ್ಕಿಯನ್ನು ತಿನ್ನಬಹುದು. ಹಾಗೆಯೇ ಬುದ್ಧಿ, ಶ್ರದ್ಧೆಯನ್ನು ಉಪಯೋಗಿಸಿದರೇ ಸ್ವಚ್ಛವಾದ ಜ್ಞಾನವನ್ನು ಹೊಂದಬಹುದು. ಕಲುಷಿತ ಜ್ಞಾನ ಎನ್ನುವುದು ಒಂದು ಮತಕ್ಕೇ ಪರಿಮಿತವಲ್ಲ. ಅದು ಎಲ್ಲ ಮತ ಗ್ರಂಥಗಳಲ್ಲಿ ಇದೆಯೆಂದು ಒಪ್ಪಿಕೊಳ್ಳುವುದು ತಪ್ಪುವುದಿಲ್ಲ. ಬಜಾರಿನಲ್ಲಿ ಎಷ್ಟು ಒಳ್ಳೆಯ ಹೆಸರಿದ್ದರೂ ಕೊನೆಗೆ ಕಲುಷಿತ ಅಕ್ಕಿಯೇ ಸಿಕ್ಕಿದಹಾಗೆ, ಯಾವುದು ಸ್ವಚ್ಛವಾದ ಮತವೆಂದರೂ, ಯಾವುದು ಸ್ವಚ್ಛವಾದ ಗ್ರಂಥವೆಂದರೂ, ಅದರಲ್ಲಿ ಅಷ್ಟೋ ಇಷ್ಟೋ ಕಲುಷಿತ ಜ್ಞಾನವಿರುತ್ತದೆ. ಅದರಲ್ಲಿ ಸ್ವಚ್ಛತೆ ಸಿಗಬೇಕೆಂದರೇ ತಿಳಿದುಕೊಳ್ಳುವ ಮನುಷ್ಯನಲ್ಲಿನ ಬುದ್ಧಿಯನ್ನನುಸರಿಸಿ, ಶ್ರದ್ಧೆಯನ್ನನುಸರಿಸಿ ಇರುತ್ತದೆ.

**38) ಪ್ರ :– ನಾವು ದೇವರು ಒಬ್ಬನೇ, ಭೂಮಿಮೇಲೆ ಇರುವ ದೇವರ ಜ್ಞಾನ ಒಂದೇ ಎಂದು ಮೂರು ಮತಗಳಿಗು ಒಬ್ಬನೇ ಅಧಿಪತಿಯೆಂದು, ಮೂರು ಮತಗಳಲ್ಲಿ ಹೇಳಿದ ಜ್ಞಾನ ಒಂದೇ ಇರುತ್ತದೆಂದು, ನಾವು ಮೂರು ಮತಗಳ ಗ್ರಂಥಗಳನ್ನು ಓದುತ್ತಿದ್ದೇವೆ. ಆದರೇ ನಮ್ಮ ಮತದಲ್ಲಿನ ಕೆಲವರು ಬೋಧಕರು, ಮತ ಹಿರಿಯರು ನಮ್ಮನ್ನು ದಂಡಿಸಿ ನಾವು ಕ್ರೈಸ್ತರಾಗಿದ್ದು, ಇತರ ಮತಗಳ ಗ್ರಂಥಗಳನ್ನು ಓದಬಾರದೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಇತರರು ಬರೆದ ಕ್ರೈಸ್ತವ ಗ್ರಂಥಗಳನ್ನು ಕೂಡಾ ಓದಬಾರದೆಂದು ಹೇಳಿದ್ದಾರೆ. ಇತರೆ ಮತ ಗ್ರಂಥಗಳೆಂದರೇ ಮತದ್ವೇಷದಿಂದ ಹಾಗೆ ಹೇಳುತ್ತಿದ್ದಾರೆಂದು ಅಂದುಕೊಳ್ಳಬಹುದು. ಹಾಗೆ ಅಲ್ಲದೆ ಇತರರು ಅಂದರೆ ಇತರೆ ಮತದವರು ಯೇಸುನನ್ನು ಕುರಿತು ದೊಡ್ಡದಾಗಿ ಬರೆದರೂ, ಬೈಬಲ್‌ನ್ನು ಕುರಿತು ದೊಡ್ಡದಾಗಿಬರೆದರೂ, ಅಂತಹ ಗ್ರಂಥಗಳನ್ನು ಕೂಡಾ ಓದಬಾರದೆಂದು ಏಕೆ ಹೇಳುತ್ತಿದ್ದಾರೆ?**

**ಉತ್ತರ :-** ಇತರರು ಬರೆದ ಯಾವುದನ್ನೂ ಓದಬಾರದೆಂದು ಹೇಳುತ್ತಿದ್ದಾರೆಂದರೇ ಇದರಲ್ಲಿ ಮತದ್ವೇಷ ಹೊರತು ಏನೂ ಇಲ್ಲ. ಇತರೆ ಮತದವರು ತಮ್ಮ ಮತದೊಳಗೆ ಸೇರಿಹೋಗಿ ಯೇಸುನನ್ನು ಕುರಿತು ಬರೆದಾಗ ಸರಿಹೋಗಿದೆ ಅಲ್ಲವೆ! ಇತರೆ ಮತದಲ್ಲಿ ಇದ್ದು ಯೇಸು ಹಿರಿಮೆಯನ್ನು ಕುರಿತು ಬರೆದರೆ ಅದು ಏಕೆ ಆಮೋದಯೋಗ್ಯವಲ್ಲ? ಹಾಗೆ ಇತರೆ ಮತಸ್ಥರು ಬರೆದಿರುವುದು ಓದಬಾರದೆನ್ನುವ ನಿಯಮವನ್ನು ಇಡುವುದರಲ್ಲಿ ಅವರ ಉದ್ದೇಶ ಇತರ ಮತದವರು ಕೂಡಾ ನಮ್ಮ ಮತದೊಳಗೆ ಬಂದರೆ ನಮ್ಮವರಾಗುತ್ತಾರೆಂದು ಹೇಳಿದಂತಿದೆ. ನಮ್ಮವನು ಅಲ್ಲದಂತೆ ನಮ್ಮ ದೇವರನ್ನು ಕುರಿತು ಬರೆದರೂ ನಾವು ಒಪ್ಪಿಕೊಳ್ಳುವುದಿಲ್ಲವೆಂದರೇ ಅವರದ್ದು ಕೇವಲ ಮತ ಆತಂಕ ಹೊರತು ಇತರ ಏನೂ ಇಲ್ಲವೆಂದು ತಿಳಿದಿದೆ. ಇದು ಕೇವಲ ಮತ ಹುಚ್ಚು ಇರುವವರು ಮಾತನಾಡುವ ಮಾತುಗಳೇ ಹೊರತು ತಿಳಿದ ಜ್ಞಾನಿಗಳು ಮಾತನಾಡುವ ಮಾತಲ್ಲ. ಯೇಸು ಎಲ್ಲಾದರೂ ನನ್ನ ಮತದವರು ಕ್ರೈಸ್ತರೆಂದು ಹೇಳಿದ್ದಾನಾ? ನಾನು ಕ್ರೈಸ್ತರಿಗೆ ಮಾತ್ರವೇ ನನ್ನ ಬೋಧನೆಯನ್ನು ಹೇಳುತ್ತಿದ್ದೇನೆಂದು ಹೇಳಿದ್ದಾನಾ? ಯೇಸು ತನ್ನ ಜ್ಞಾನವನ್ನು ಬೋಧಿಸುವಾಗ ಸಮಸ್ತ ಜನರಿಗೆಂದು ಹೇಳಿದ್ದಾನೆ. ಅಂತಹದರಲ್ಲಿ ಸಮಸ್ತ ಜನರಲ್ಲಿ ಯಾರಾದರೂ, ಯಾವ ಮತದವನಿಗಾದರೂ ಯೇಸು ಜ್ಞಾನವನ್ನು ಕುರಿತಾದ ಅರ್ಹತೆ, ಅಧಿಕಾರ ವಿರುತ್ತದೆ. ಇತರರು ಬರೆದಿರುವುದನ್ನು ಓದಬಾರದೆನ್ನುವವನನ್ನಾಗಲೀ ಇತರ ಮತ ಗ್ರಂಥಗಳನ್ನು ಓದಬಾರದೆನ್ನುವವನನ್ನಾಗಲೀ, ಅವನು ಎಷ್ಟು ದೊಡ್ಡ ಜ್ಞಾನಿ ಆದರೂ ಆತನನ್ನು ಅಜ್ಞಾನಿಯಾಗಿ ಲೆಕ್ಕಿಸಿರಿ. ಅಂತಹವರ ಮಾತುಗಳನ್ನು ಕೇಳುವವರನ್ನು ಸಹ ಯೇಸು ಕ್ಷಮಿಸುವುದಿಲ್ಲ. ಯೇಸು ದೇವರೆನ್ನುವ ಯಾವ ಕ್ರೈಸ್ತನೂ ಹಾಗೆ ಹೇಳಬಾರದು. ಹಾಗೆ ಹೇಳಿದ್ದಾನೆಂದರೇ ಅವನು ಯೇಸನ್ನು, ಯೇಸು ಜ್ಞಾನವನ್ನು ಗೌರವಿಸಿದಂತೇಯಾಗುತ್ತದೆ. ಇದು ಒಂದು ಕ್ರೈಸ್ತವ ಮತದಲ್ಲೇ ಅಲ್ಲದೆ ಎಲ್ಲ ಮತಗಳಲ್ಲಿರುವ ಅಜ್ಞಾನವೇ ಎಂದು ಹೇಳಬಹುದು. ಒಬ್ಬ ಗುರು ಇನ್ನೊಬ್ಬ ಗುರು ಬರೆದ ಯಾವ ಗ್ರಂಥವನ್ನು ಓದಬಾರದೆಂದು ತಮ್ಮ ಶಿಷ್ಯರಿಗೆ ಹೇಳುವುದು ನಡೆಯುತ್ತಿದೆ. ನಮ್ಮ ಗ್ರಂಥಗಳು ಇತರೆ ಮತದವರಿಗೆ

ಕೊಡಿ, ಆದರೆ ಇತರ ಮತದವರು ಬರೆದ ಯಾವ ಗ್ರಂಥವನ್ನು ಓದಬೇಡವೆಂದು ಹೇಳುವ ಮತಸಂಸ್ಥೆಗಳು ಇವೆ. ಇಂತಹವರು ಎಷ್ಟು ಕಾಲವಿದ್ದರೂ ಅವರಿಗೆ ದೇವರ ಜ್ಞಾನ ಸಿಗುವುದಿಲ್ಲ. ಅವರು ಮತಮೌಢ್ಯದಲ್ಲೇ ಮುಳುಗಿರುತ್ತಾರೆ.

**39) ಪ್ರ :– ಒಂದು ದೈವಗ್ರಂಥದಲ್ಲಿನ ಒಂದು ವಾಕ್ಯವನ್ನು ಎಷ್ಟೋ ವಿವರವಾಗಿ ವಿವರಿಸಿ ಹೇಳಿದರೂ ಅರ್ಥ ಮಾಡಿಕೊಳ್ಳದ ಸ್ಥಿತಿಯಲ್ಲಿ ಕೆಲವರಿದ್ದಾರೆ. ಅಂತಹವರು ಇತರರು ಏನು ಹೇಳುತ್ತಿದ್ದಾರೆಂದು ಸಹ ನೋಡುತ್ತಿಲ್ಲ. ತಮಗೆ ಒಂದು ವಾಕ್ಯವನ್ನು ಕುರಿತು ತಿಳಿದಿರುವುದನ್ನೇ ಸತ್ಯವೆಂದು ಹೇಳುತ್ತಿದ್ದಾರೆ. ಯಾವ ವಿಧವಾಗಿ ನೋಡಿದರೂ ಅದು ಸತ್ಯವಾಗಿ ಇರುವುದಿಲ್ಲ. ಯಾವ ವಾದನೆಗೆ ಆಗಲಿ, ಯಾವ ಪ್ರಶ್ನೆಗಾಗಲಿ ಅವರು ಹೇಳುವುದು ನಿಲ್ಲುವುದಿಲ್ಲ. ಆದರೂ ಸ್ವಲ್ಪವಾದರು ವಿಚಕ್ಷಣೆ ಇಲ್ಲದಂತೆ "ತಾವು ಹಿಡಿದುಕೊಂಡ ಮೊಲಕ್ಕೆ ಮೂರೇಕಾಲು" ಎನ್ನುವಂತೆ ಮೊಂಡರಂತೆ ವಾದಿಸುತ್ತಿರುವರು. ಅಂತಹವರು ಸತ್ಯವನ್ನು ತಿಳಿದುಕೊಳ್ಳುವುದಿಲ್ಲವಾ?**

**ಉತ್ತರ :–** ಅಂತಹವರಿಗೆ ಮೊದಲೇ ದೇವರು ತೀರ್ಪು ಕೊಟ್ಟಿರುತ್ತಾನೆ. ಅಂತಹವನು ದೇವರಿಗೆ ಇಷ್ಟವಿಲ್ಲದವನಾದ್ದರಿಂದ ಅವನನ್ನು ಯಾರೂ ಬದಲಾಯಿಸುವುದಿಲ್ಲ. ಅವನಿಗೆ ದೇವರೇ ತನ್ನ ಜ್ಞಾನವನ್ನು ಅರ್ಥವಾಗದಂತೆ ಮಾಡಿ ದೇವರಿಂದ ದೂರವಾಗಿ ಹೋಗುವಂತೆ ಮಾಡುತ್ತಾನೆ. ಅಂತಹವನಿಗೆ ಎಷ್ಟು ದೊಡ್ಡ ಜ್ಞಾನವನ್ನು ಹೇಳಿದರೂ ಅವನು ಕೇಳುವ ಸ್ಥಿತಿಯಲ್ಲಿ ಇರುವುದಿಲ್ಲ. ಮೇಲಾಗಿ ತನಗೆ ತಿಳಿದಷ್ಟು ಜ್ಞಾನ ಯಾರಿಗೂ ತಿಳಿದಿಲ್ಲವೆನ್ನುವ ಉದ್ದೇಶ ದಲ್ಲಿರುತ್ತಾನೆ. ದೇವರ ಉಗ್ರತೆ, ದೇವರ ಶಾಪ ಆತನ ಮೇಲೆ ಇರುವುದರಿಂದ ಅವನು ದೈವಮಾರ್ಗದೊಳಗೆ ಹೋಗುವ ಅವಕಾಶವೇ ಇಲ್ಲ. ಅವನು ದೂರವಾಗಿ ಇರುವಂತೆ ದೇವರೇ ಮಾಡಿದ್ದಾನೆ. ಆದ್ದರಿಂದ ಅವನಿಗೆ ಕ್ಷಮಾಪಣೆ ಇಲ್ಲ, ಅವನು ಬದಲಾಗುವುದಿಲ್ಲ.

**40) ಪ್ರ :– ಮತದಲ್ಲಿ ಮುಖ್ಯವಾದ ಮನುಷ್ಯ, ಅಂತಸ್ತಿನಲ್ಲಿ ಮುಖ್ಯವಾದ ಮನುಷ್ಯ, ಬೋಧನೆ ಮಾಡುವುದರಲ್ಲಿ ಅಗ್ರಸ್ಥಾನದಲ್ಲಿರುವವನಾದ್ದರಿಂದ ಆತನು ಏನು ಹೇಳಿದರೇ ಅದೇ ದೈವವಾಕ್ಕು ಎಂದು ಆಚರಿಸುವ ಪ್ರಜೆಗಳಿರುವ**

ಮನುಷ್ಯನಾಗಿರುವುದರಿಂದ ಆತನು ಪ್ರಜೆಗಳಿಗೆ ಬಹಳ ಗೌರವನೀಯನಾಗಿರುತ್ತಾನೆ. ಆತನಿಗೆ ಪ್ರಜೆಗಳಲ್ಲಿ ಒಳ್ಳೆಯ ಸ್ಥಾನ ಇದೆ ಆದರೆ, ದೇವರ ಇಷ್ಟತೆ ಆತನ ಮೇಲೆ ಇಲ್ಲದಿರುವುದರಿಂದ ದೈವಜ್ಞಾನ ಆತನಿಗೆ ಸರಿಯಾದ ಮಾರ್ಗದಲ್ಲಿ ಅರ್ಥವಾಗಲಿಲ್ಲ. ಆತನು ಬೋಧಕರಲ್ಲಿ ಅಗ್ರಸ್ಥಾನದಲ್ಲಿ ಇರುವುದರಿಂದ ಆತನು ದೈವಗ್ರಂಥವೆಲ್ಲವನ್ನೂ ಓದಿದ್ದಾನೆ. ಆತನಿಗೆ ಗ್ರಂಥದಲ್ಲಿ ಎಲ್ಲಿ ಯಾವ ವಾಕ್ಯವಿದೆಯೋ ತಿಳಿದಿದೆ. ವಾಕ್ಯದಲ್ಲಿ ಕಾಮಾ, ಫುಲ್‌ಸ್ಟಾಪ್‌ಗಳೊಂದಿಗೆ ಸಹ ವಾಕ್ಯವನ್ನು ಹೇಳುವ ಜ್ಞಾಪಕಶಕ್ತಿ ಇರುವವನಾಗಿದ್ದಾನೆ. ಯಾವ ವಾಕ್ಯವಾದರೂ ಧಾರಾಳವಾಗಿ ಹೇಳುವ ಸಾಮರ್ಥ್ಯ ಆತನಿಗಿದೆ. ಯಾವುದು ಹೇಗಿದ್ದರೂ ದೇವರ ದಯೆ ಇಲ್ಲದಿರುವುದರಿಂದ ಆತನಿಗೆ ದೈವವಾಕ್ಯ ಒಂದೂ ಸಹ ಧರ್ಮಬದ್ಧವಾಗಿ ಅರ್ಥವಾಗಲಿಲ್ಲ. ದೈವಗ್ರಂಥದಲ್ಲಿನ ಎಲ್ಲ ವಾಕ್ಯಗಳು ಆತನಿಗೆ ಕಂಠಾಪಾಟವೇ ಆದರೂ ಅವುಗಳಲ್ಲಿನ ಧರ್ಮಗಳು ಆತನಿಗೆ ತಿಳಿಯಲಿಲ್ಲ. "ದೇವರಿಗೆ ಇಷ್ಟವಾದರೆ ಸನ್ಮಾರ್ಗದಲ್ಲೂ, ಇಷ್ಟವಾಗದೇ ಹೋದರೇ ಅಪಮಾರ್ಗದಲ್ಲೂ ಕಳುಹಿಸುತ್ತೇನೆಂದು" ಹೇಳಿದಂತೆ ಪ್ರಪಂಚದಲ್ಲಿ ಎಷ್ಟು ದೊಡ್ಡವನಾದರೂ ದೇವರು ಆತನ ಸ್ಥಾನವನ್ನು ಲೆಕ್ಕಮಾಡದೆ ತನ್ನ ಇಷ್ಟಬಂದಂತೆ ಮಾಡುತ್ತಾನೆ. ಹಾಗಿರುವಾಗ ಆತನು ಹೇಳುವ ವಾಕ್ಯ ದೇವರ ವಾಕ್ಯವೇ ಆದರೂ ಆತನು ಹೇಳುವ ವಿವರ ದೇವರ ಧರ್ಮಕ್ಕೆ ವಿರುದ್ಧವಾಗಿರುವು ದರಿಂದ ಆತನ ಮಾತನ್ನು ಅನುಸರಿಸುವವರೆಲ್ಲರೂ ಅಧರ್ಮ ಮಾರ್ಗದಲ್ಲೇ ಹೋದಂತಾಗಿದೆ. ಕೆಲವರಿಗೆ ತಮ್ಮ ನಾಯಕನು, ತಮ್ಮ ಬೋಧಕನು ಹೇಳುವ ಮಾತುಗಳು ಅಧರ್ಮಗಳಾಗಿವೆಯೆಂದು, ದೇವರ ಜ್ಞಾನಕ್ಕೆ ವಿರುದ್ಧವಾಗಿ ಇವೆಯೆಂದು ತಿಳಿದಾಗ ಏನು ಮಾಡಬೇಕು? ಮೇಲಿರುವ ಮತ ನಿಯಮಗಳ ಪ್ರಕಾರ ತಮ್ಮ ನಾಯಕನು, ಬೋಧಕನಾದ ಆತನ ಮಾತಿನ ಪ್ರಕಾರ ಹೋಗಬೇಕಾ? ಅಥವಾ ಆತನ ಮಾತನ್ನು ಅಲ್ಲಗಳೆಂದು ಆತನು ಇಟ್ಟಿರುವ ಮತ ನಿಯಮಗಳನ್ನು ಬಿಟ್ಟು ದೇವರು ಹೇಳಿದ ಜ್ಞಾನವನ್ನು ಅನುಸರಿಸಬೇಕಾ? ದೇವರ ಜ್ಞಾನವನ್ನು ಧರ್ಮಯುಕ್ತವಾಗಿ ಅನುಸರಿಸಬೇಕೆಂದರೆ ತಮ್ಮ ಮತ ಹಿರಿಯರಾದ ಆತನ ಮಾತನ್ನು ಕೇಳಬಾರದು. ಆತನ ಮಾತನ್ನು ಕೇಳದೇ ಹೋದರೇ, ಕೇಳದವರು ಮತ ನಿಯಮಗಳನ್ನು ಅತಿಕ್ರಮಿಸಿದಂತಾಗುತ್ತದೆ. ಆಗ ಹತ್ತು ಜನರ ದೃಷ್ಟಿಯಲ್ಲಿ

**ತಮ್ಮ ಮತ ಹಿರಿಯನನ್ನು ಅಲ್ಲಗಳೆದು ಪಕ್ಕ ದಾರಿಯೊಳಗೆ ಹೋದಂತಾಗುತ್ತದೆ. ಇಂತಹ ಪರಿಸ್ಥಿತಿಗಳಲ್ಲಿ ನಾವು ಯಾವಕಡೆ ಹೋಗಬೇಕು? ದೇವರ ಧರ್ಮದ ಕಡೆ ಹೋಗಬೇಕಾ? ಮತ ನಿಯಮದ ಕಡೆ ಹೋಗಬೇಕಾ? ನೀವು ಸರಿಯಾದ ಸಮಾಧಾನವನ್ನು ಹೇಳಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ದೇಶದಲ್ಲಿ ಬಹಳ ಜನ ಇಂತಹ ಪ್ರಶ್ನೆಯ ಹತ್ತಿರ ಸಿಲುಕಿಕೊಂಡು ಹತ್ತು ಜನರಿಗೆ ವಿರುದ್ಧವಾಗಿ ಕಾಣಿಸುತ್ತೇವೆಂದು ಮತ ನಿಯಮವನ್ನು ದಾಟಿಕೊಂಡು ಹೊರಗೆ ಬರಲಾರದೆ ಒಳಗೊಳಗೆ ಕೊರಗಿ ಹೋಗುವವರು ಬಹಳ ಜನ ಇದ್ದಾರೆ. ಅಂತಹವರು ಕೆಲವರು ಹೊರಗೆ ಯಾವ ಕಾರಣಕ್ಕು ಕಾಣಿಸದಂತೆ ಒಳಗೆ ದೇವರ ಮಾರ್ಗದಲ್ಲಿ ಪ್ರಯಾಣಿಸಬೇಕೆಂದು ಅಂದು ಕೊಳ್ಳುವವರು ಕೂಡಾ ಇದ್ದಾರೆ. ಆದರೇ ಮತ ನಿಯಮಗಳು ದೇವರ ಧರ್ಮಗಳು ಪೂರ್ವ ಪಶ್ಚಿಮಗಳಂತೆ ಇರುವುದರಿಂದ ಹೇಗೆ ತಿರುಗಿದರೂ ಹೊರಬೀಳಬೇಕಾಗಿರುವುದೇ ಎಂದು ಅಂದುಕೊಳ್ಳುವವರು ಕೆಲವರು ಇದ್ದಾರೆ. ಅಂತಹವರಿಗೆ ನಾನು ಹೇಳುವ ಸಮಾಧಾನ ಒಂದೇ! ಸರ್ವವನ್ನೂ ಸೃಷ್ಠಿಸಿದ ದೇವರೇ ಎಲ್ಲರಿಗೂ ಹಿರಿಯನು ಆದರೆ, ನಿನ್ನೆ ಮೊನ್ನೆ ಹುಟ್ಟಿದ ಮತ ದೊಡ್ಡದಲ್ಲ. **ದೇವರಿಗೆ ತಿಳಿಯದಂತೆ ಯಾವುದೂ ನಡೆಯುವುದಿಲ್ಲ. ಎಲ್ಲಾ ಆತನಿಗೆ ತಿಳಿದೇ ನಡೆಯುತ್ತವೆ.** ಪ್ರಪಂಚಕ್ಕೆಲ್ಲಾ ದೇವರೇ ಹಿರಿಯನು. ಜ್ಞಾನಗಳೆಲ್ಲವುಗಳಿಗಿಂತ ಆತನ ಜ್ಞಾನವೇ ದೊಡ್ಡದು. ಹಾಗಿರುವಾಗ ಬುದ್ಧಿವಂತನಾದವನು ದೇವರ ಜ್ಞಾನವನ್ನೇ ಅನುಸರಿಸುವನು ಆದರೆ ಮತ ನಿಯಮಗಳನ್ನು ಅನುಸರಿಸುವುದಿಲ್ಲ. ಮನುಷ್ಯರು ಕಲ್ಪಿಸಿದ ಮತ ನಿಯಮಗಳನ್ನು ಬಿಟ್ಟು ದೇವರು ಕೊಟ್ಟಿರುವ ಜ್ಞಾನದ ಕಡೆ ಹೋಗುವವನು ದೇವರ ದೃಷ್ಠಿಯಲ್ಲಿ ಆತನಿಗೆ ಇಷ್ಟನಾಗುತ್ತಾನೆ. ಪ್ರಪಂಚದಲ್ಲಿ ಮನುಷ್ಯರು ಕಲ್ಪಿಸಿಕೊಂಡ ಅದನ್ನು ಲೆಕ್ಕಮಾಡದೆ ದೇವರ ಜ್ಞಾನವನ್ನು, ದೇವರ ವಾಕ್ಯವನ್ನು ಗೌರವಿಸುವವನು ಬೇಗನೇ ದೇವರ ಹತ್ತಿರಕ್ಕೆ ಸೇರಿಕೊಳ್ಳುವನು. ನಾನು ಹಿಂದೂಮತದಲ್ಲಿ ಹುಟ್ಟಿದ್ದೇನೆ. ಆದರೇ ದೇವರು ಹೇಳಿದ ಭಗವದ್ಗೀತೆ ಪ್ರಕಾರ ನಡೆದುಕೊಳ್ಳುತ್ತಿದ್ದೇನೆ. ಹಿಂದೂಮತದಲ್ಲಿನ ನಿಯಮಗಳ ಪ್ರಕಾರ ನಾವು ಎಂದಿಗೂ ನಡೆಯಲಿಲ್ಲ. ಮನುಷ್ಯರು ಸೃಷ್ಠಿಸಿದ

ನಿಯಮಗಳನ್ನು ಆಚರಿಸುವವನು ದೇವರ ಕಡೆ ಹೋಗಲಾರನು. ದೇವರ ಕಡೆ ಹೋಗಬೇಕೆಂದುಕೊಳ್ಳುವವನು ಮನುಷ್ಯರು ಇಟ್ಟಿರುವ ನಿಯಮಗಳನ್ನು ಬಿಟ್ಟುಹಾಕಬೇಕಾದ್ದೇ.

ಮನುಷ್ಯನಲ್ಲಿ ಜ್ಞಾನಕ್ಕೆ ನಿಲಯ ತಲೆ. ತಲೆ ಮುಂದಿನ ಭಾಗವನ್ನು ಅಗ್ರಭಾಗ ಎನ್ನುತ್ತಾರೆ ಅಥವಾ ಹಣೆ ಎನ್ನುತ್ತಾರೆ. ಮನುಷ್ಯ ನನ್ನಲ್ಲಿ ಈ ಜ್ಞಾನವಿದೆಯೆಂದು ತಿಳಿಸುವ ನಿಮಿತ್ತ ಹಣೆಯ ಭಾಗದಲ್ಲಿ ತಲೆಯಲ್ಲಿರುವ ಜ್ಞಾನಕ್ಕೆ ಸಂಬಂಧಿಸಿದ ಗುರುತನ್ನು ಇಡುತ್ತಿದ್ದರು. ಒಂದು ರಾಜ್ಯ ಯಾರದು, ಅದರಲ್ಲಿ ಯಾವ ರಾಜ ಇದ್ದಾನೆನ್ನುವುದಕ್ಕೆ ಚಿಹ್ನೆಯಾಗಿ ರಾಜನ ಕೋಟೆಯ ಮೇಲೆ ಆ ರಾಜ್ಯಕ್ಕು, ರಾಜನಿಗು ಸಂಬಂಧಿಸಿದ ಜೆಂಡಾವನ್ನು ಇಡುತ್ತಿದ್ದರು. ಅದೇ ರೀತಿಯಾಗಿ ಒಂದು ಶರೀರ ಎನ್ನುವ ರಾಜ್ಯದಲ್ಲಿ ಯಾವ ಜ್ಞಾನವಿರುವುದು ತಿಳಿಯುವಂತೆ ಅವರವರ ಹಣೆಯ ಭಾಗದ ಮೇಲೆ ಆಯಾ ಗುರುತುಗಳನ್ನು ಇಟ್ಟುಕೊಳ್ಳುತ್ತಿದ್ದರು. ಪೂರ್ವದಿಂದ ಅಂದರೆ ಕೃತಯುಗದಿಂದ ಕಲಿಯುಗ ದವರೆಗು ಬೇರೆ ಮತಗಳೇ ಇಲ್ಲದಿರುವುದರಿಂದ ಒಂದೇ ಇಂದೂ ಸಮಾಜ ಇರುತ್ತಿತ್ತು. ಒಂದಾಗಿರುವ ಇಂದೂ ಸಮಾಜ ಕಲಿಯುಗದಲ್ಲಿ ಮೂರಾಗಿ ಸೀಳಿಹೋಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಎನ್ನುವ ಮೂರು ಭಾಗಗಳಾಗಿ ಬೇರ್ಪಟ್ಟಿದೆ. ಹಾಗೆ ಸೀಳಿಹೋಗುವುದರಿಂದ ಅದ್ವೈತಕ್ಕೆ ಒಂದು ಗುರುತು, ವಿಶಿಷ್ಟಾದ್ವೈತಕ್ಕೆ ಒಂದು ಗುರುತು, ದ್ವೈತಕ್ಕೆ ಒಂದು ಗುರುತನ್ನು ಏರ್ಪಡಿಸಿಕೊಂಡು ಯಾರಿಗೆ ಅವರು ಆ ಗುರುತುಗಳನ್ನು ತಮ್ಮ ಮುಖದ ಮೇಲೆ ಅಂದರೆ ಹಣೆಯ ಭಾಗದಲ್ಲಿ ಲಾಂಛನದ ಹಾಗೆ ಇಟ್ಟುಕೊಳ್ಳುತ್ತಿದ್ದರು. ನಾನು ಹಿಂದೂ ವಾದರೂ ಹಿಂದೂ ಮತದಲ್ಲಿನ ಯಾವ ಸೀಳಿಕೆ ರಾಜ್ಯದಲ್ಲೂ ಇಲ್ಲ. ಅಂದರೆ ಯಾವ ಆಧ್ಯಾತ್ಮಿಕ ಸೀಳಿಕೆಯಲ್ಲೂ ಇಲ್ಲ. ಆ ಗುರುತುಗಳನ್ನು ಯಾವುದನ್ನೂ ನನ್ನ ಮುಖದ ಮೇಲೆ ಇಟ್ಟುಕೊಂಡರೂ ನಾನು ಇಂತಹ ಹಿಂದೂವೆಂದೂ, ಆ ಹಿಂದೂವಲ್ಲಿ ಕೂಡಾ ಇಂತಹ ಸೀಳಿಕೆಯಲ್ಲಿರುವಂತಹವನೆಂದು ಹೇಳಿದಂತಿರುತ್ತದೆ. ಆದ್ದರಿಂದ ನಾನು ಮತ ನಿಯಮಗಳನ್ನು ಬಿಟ್ಟವನಾಗಿ ಮತ ಸಂಬಂಧ ಗುರುತನ್ನು ನಾನು ಧರಿಸದೆ ದೇವರು ಹೇಳಿದ ದೈವಗ್ರಂಥಗಳ

ಪ್ರಕಾರ ನಡೆದುಕೊಳ್ಳುತ್ತಿದ್ದೇನೆ. ಹಾಗಿರುವುದರಿಂದ ನಾನು ಹಿಂದೂಗಳಿಗೆ ದಾರಿ ತಪ್ಪಿದವನಾಗಿ ಕಾಣಿಸಿದರೂ, ದೇವರ ದೃಷ್ಠಿಯಲ್ಲಿ ಸಕ್ರಮ ಮಾರ್ಗದಲ್ಲಿ ಇರುವವನಾಗಿ ಇದ್ದೇನೆ. ನಾನು ಎಲ್ಲ ಮತಗಳಿಗು ದೊಡ್ಡವನಾದ ದೇವರನ್ನು ಗೌರವಿಸುವವನಾಗಿ, ಆತನ ಜ್ಞಾನವನ್ನು ಅನುಸರಿಸುವವನಾಗಿ ಇದ್ದೂ, ನಾನು ಇಂತಹವನೆಂದು, ನಾನು ದೇವರ ಮಾರ್ಗದಲ್ಲಿ ಇದ್ದೇನೆಂದು ತಿಳಿಸುವ ನಿಮಿತ್ತ ದೇವರ ಚಿಹ್ನೆಯಾದ ಏಳು ಆಕಾಶಗಳ ಗುರುತನ್ನು ನನ್ನ ಹಣೆಯ ಭಾಗದಲ್ಲಿ ಇಟ್ಟುಕೊಂಡು ತೋರಿಸುತ್ತಿದ್ದೇನೆ. ಈ ವಿಧವಾಗಿ ನಾವಿರುವುದರಿಂದ ನಮ್ಮನ್ನು ಸ್ಫೂರ್ತಿಯಾಗಿ ತೆಗೆದುಕೊಂಡು ನಮ್ಮಹಾಗೆ ಕೆಲವರಾದರೂ ಅವರವರ ಮತ ಬಂಧನಗಳಿಂದ ಹೊರಬಿದ್ದು ದೇವರ ಮಾರ್ಗದೊಳಗೆ ಬರಬಲ್ಲರೆಂದು ಅಂದುಕೊಳ್ಳುತ್ತಿದ್ದೇನೆ. ನಾವು ಹೇಳುವ ದೇವರ ಜ್ಞಾನವನ್ನು ನೋಡಿ, ಮತರಹಿತ ಮಾರ್ಗವನ್ನು ನೋಡಿ ನಮ್ಮ ಕಡೆ ಬಹಳ ಮಂದಿ ಬಂದು ಅಸಲಾದ ದೇವರ ಮಾರ್ಗದಲ್ಲಿ ಪ್ರಯಾಣಿಸುತ್ತಿದ್ದಾರೆ. ಆದ್ದರಿಂದ ನೀವು ಕೂಡಾ ಧೈರ್ಯವಾಗಿ 'ಮತ' ಎನ್ನುವ ಬಲೆಯಿಂದ ಹೊರಬಿದ್ದು 'ದೇವರು' ಎನ್ನುವ ರಾಜ್ಯದಲ್ಲಿ ಪ್ರವೇಶಿಸಬೇಕೆಂದು ತಿಳಿಸುತ್ತಿದ್ದೇನೆ. ನೀವು ಮತ ಹಿರಿಯನೆಂದೋ, ಮತ ಬೋಧಕನೆಂದೋ ದೊಡ್ಡದಾಗಿ ನೋಡಿಕೊಳ್ಳುವವರು ಎಂತಹವನಾದರೂ ಸರಿಯಾದ ಜ್ಞಾನವಿಲ್ಲದಿರು ವಾಗ ಆತನ ಮಾತನ್ನು, ಆತನ ಹಿರೆತನವನ್ನು ದಾಟಿ ಆತನನ್ನು ಸಹ ಸೃಷ್ಠಿಸಿದ ದೇವರ ಕಡೆ ಬರಬೇಕಾಗಿದೆಯೆಂದು ತಿಳಿಸುತ್ತಿದ್ದೇನೆ.

**41) ಪ್ರ :– ಈಗ ಮುಖ್ಯವಾಗ ಮೂರು ಮತಗಳಿವೆಯಲ್ಲವೆ! ಹಿಂದೂ ಮತದವರು ಕೆಲವರು ನಾವು ಹಿಂದೂಗಳು ಎಂದು ಹೇಳುತ್ತಾ ನಮ್ಮ ಮತ ಕ್ಷೀಣಿಸಿಹೋಗುತ್ತಿದೆ ಎನ್ನುತ್ತಾ, ನಮ್ಮ ಮತದಲ್ಲಿರುವವರೆಲ್ಲರನ್ನೂ (ಹಿಂದೂಗಳೆಲ್ಲರನ್ನೂ) ಕ್ರೈಸ್ತರಾಗಿ, ಮುಸ್ಲಿಮ್‌ರಾಗಿ ಆ ಮತದವರು ಬದಲಾಯಿಸುತ್ತಿದ್ದಾರೆನ್ನುತ್ತಾ, ಈ ವಿಧವಾಗಿ ಆದರೇ ಸ್ವಲ್ಪ ಕಾಲಕ್ಕೆ ಹಿಂದೂ ಮತ ಪೂರ್ತಿಯಾಗಿ ಕ್ಷೀಣಿಸಿ ಹೋಗಬಲ್ಲದೆನ್ನುತ್ತಾ, ಹಾಗೆ ಆಗದಿರುವುದಕ್ಕೆ ನಮ್ಮ ಮತವನ್ನು ನಾವು ರಕ್ಷಿಸಿಕೊಳ್ಳುವುದಕ್ಕೆ ಬೇಕಾದ ಪದ್ಧತಿಗಳನ್ನು ಕೂಗೊಳ್ಳುತ್ತಿದ್ದೇವೆನ್ನುತ್ತಾ "ಹಿಂದೂ ಧರ್ಮರಕ್ಷಣೆ ಸಂಘಗಳೆಂದೂ",**

**"ಹಿಂದೂಮತ ರಕ್ಷಣ ಸಮಿತಿಗಳು" ಎಂದು ಅನೇಕ ಹೆಸರುಗಳೊಂದಿಗೆ ಹಿಂದೂ ಮತ ಸಂಸ್ಥೆಗಳು ತಯಾರಾಗಿವೆ. ಆದರೇ ಆ ಸಂಸ್ಥೆಗಳಲ್ಲಿ ಕೆಲಸ ಮಾಡುವವರಿಗೆ ಹಿಂದೂಧರ್ಮಗಳಾವುವೋ ಕೂಡಾ ತಿಳಿದಿಲ್ಲ. ಅವರು ಹಿಂದೂ ಧರ್ಮಗಳೆನ್ನುವ ಒಂದನ್ನೂ ಸಹ ಇತರರಿಗೆ ಹೇಳುವ ಸಾಮರ್ಥ್ಯದಲ್ಲಿ ಇಲ್ಲ. ಅಂತಹವರು ತಮ್ಮ ಹಿಂದೂಮತವನ್ನು ಕಾಪಾಡಿಕೊಳ್ಳದೇ, ಅವರಿರುವ ಮತವನ್ನು ಬಿಟ್ಟುಹೋಗುವ ವನನ್ನು ನೋಡುತ್ತಾ, ಮತದ್ವೇಷದಿಂದ ಇತರ ಮತಗಳ ಮೇಲೆ ದ್ವೇಷವನ್ನು ಬೆಳೆಸಿಕೊಂಡು ಅಸೂಯೆಯಿಂದ ನೋಡುತ್ತಿದ್ದಾರೆ. ಹಾಗಾದರೇ ಹಿಂದೂ ಮತವನ್ನು ಕಾಪಾಡಬಲ್ಲಿರಾ?**

**ಉತ್ತರ :-** ಈ ಮಾತನ್ನು ಕಳೆದ ಐವತ್ತು ವರ್ಷಗಳಿಂದ ನಾವು ಕೇಳುತ್ತಲೇ ಇದ್ದೇವೆ. ಅಂದಿನಿಂದ ಎಷ್ಟೋ ಸಂಸ್ಥೆಗಳು ಹಿಂದೂ ಸಮಾಜ ರಕ್ಷಣೆಗೋಸ್ಕರ ವೆಂದು ತಯಾರಾಗಿವೆ. ಅಂತಹವು ಚಿಕ್ಕ ದೊಡ್ಡ ಸಂಘಗಳು ಸುಮಾರು 20ಕ್ಕೂ ಮೇಲ್ಪಟ್ಟು ಇರಬಹುದು. ಈ ಸಂಘಗಳೆಲ್ಲವೂ ಬಂದ ನಂತರವೇ ಹೆಚ್ಚು ಮತ ಮಾರ್ಪಾಟುಗಳು ನಡೆದಿವೆ. ಐವತ್ತು ವರ್ಷಗಳ ಹಿಂದೆಗಿಂತ ನಂತರವೇ ಹಿಂದೂಗಳು ಉಳಿದ ಎರಡು ಮತಗಳೊಳಗೆ ಸೇರಿಹೋಗುವುದು ನಡೆದಿದೆ. ಇಂದಿಗೂ ಹಿಂದೂಗಳ ಸಂಖ್ಯೆ ಕಡಿಮೆಯಾಗುತ್ತದೆನ್ನುವ ಆಂದೋಳನೆ ಹಿಂದೂಗಳಲ್ಲಿ ಇದೆ. ನಡೆಯುತ್ತಿರುವ ಸತ್ಯವೂ ಸಹ ಅಷ್ಟೇ! ಆದರೇ ಹತ್ತರ ಸಂಖ್ಯೆಯಲ್ಲಿರುವ ಹಿಂದೂ ಸಂಘಗಳೆಲ್ಲ ಏನು ಮಾಡುತ್ತಿದ್ದಂತೆ? ಎಂದು ನಾವು ಪ್ರಶ್ನಿಸುತ್ತಿದ್ದೇವೆ. ಹಿಂದೂ ಸಂಘಗಳು ತಯಾರಾದ ನಂತರವೇ ಹೆಚ್ಚಿನ ಜನ ಹಿಂದೂಗಳು ಕ್ರೈಸ್ತರಾಗಿ, ಮುಸ್ಲಿಮ್‌ರಾಗಿ ಬದಲಾಗಿದ್ದಾರೆ. ಈ ದಿನ ಹಿಂದೂ ರಕ್ಷಣ ಸಂಘಗಳು ಎಷ್ಟು ಇದ್ದರೂ ಅವುಗಳಲ್ಲಿ ಒಂದರಲ್ಲಾದರೂ ಆತ್ಮ ಜ್ಞಾನವನ್ನು ಕುರಿತು ತಿಳಿದವರಿದ್ದಾರಾ? ಕನಿಷ್ಟ ಇವು ಹಿಂದೂ ಧರ್ಮಗಳು ಎಂದು ಧರ್ಮಗಳನ್ನು ಕುರಿತು ತಿಳಿದವರಿದ್ದಾರಾ? ಆತ್ಮ ಜ್ಞಾನ ತಿಳಿದಿಲ್ಲ, ಹಿಂದೂ ಧರ್ಮಗಳು ತಿಳಿದಿಲ್ಲ. ಅಂತಹ ಹಿಂದೂ ಸಂಘಗಳು ಈದಿನ ಇವೆ. ಯುದ್ಧಕ್ಕೆ ಹೋಗುವವನಿಗೆ ಮೊದಲು ತನ್ನ ರಕ್ಷಣೆಗೋಸ್ಕರ ಶರೀರ ಕವಚವಿವರಬೇಕು. ನಂತರ ಶತ್ರುಗಳನ್ನು ಸಾಯಿಸುವುದಕ್ಕೆ ಆಯುಧಗಳಿರಬೇಕು.

ನಾವು ಯುದ್ಧ ಸೈನಿಕರೆಂದು ಹೆಸರು ಇಟ್ಟುಕೊಂಡವರಿಗೆ ಶರೀರಕವಚವಾಗಲೀ, ಆಯುಧಗಳಾಗಲೀ ಇಲ್ಲದಿರುವಾಗ ಏನಾಗುತ್ತದೋ ಅದೇ ಈದಿನ ಹಿಂದೂ ಮತದಲ್ಲಿ ನಡೆಯುತ್ತಿದೆ. ಈ ದಿನ ಸೈನಿಕರೆನ್ನುವವರಹತ್ತಿರ ತನ್ನ ರಕ್ಷಣೆಗೆ ಕವಚವಾಗಲೀ, ಶತ್ರು ಸಂಹಾರಕ್ಕೆ ಆಯುಧವಾಗಲೀ ಇಲ್ಲದಂತೆ ಹಿಂದೂ ರಕ್ಷಣೆ ಸೈನ್ಯದ ಹತ್ತಿರ ಕವಚವನ್ನು ಹೋಲಿದ **ಆತ್ಮಜ್ಞಾನ**ವಾಗಲೀ, ಆಯುಧವನ್ನು ಹೋಲಿದ **ಧರ್ಮಪರಿಜ್ಞಾನ**ವಾಗಲೀ ಇಲ್ಲ. ಆದ್ದರಿಂದ ಈ ದಿನ ಹಿಂದೂ ಮತ ಸಂಘಗಳು ಎಷ್ಟಿದ್ದರೂ ಮತಮಾರ್ಪಾಟು ನಡೆಯುತ್ತಲೇ ಇದೆ. ಹಿಂದೂಗಳ ಸಂಖ್ಯೆ ಕಡಿಮೆಯಾಗುತ್ತಲೇ ಇದೆ.

ಹಿಂದೂಗಳ ಮತ ರಕ್ಷಣೆ ಸಂಘಗಳು ಈ ದಿನ ಎಷ್ಟು ಇದ್ದರೂ ಅವರೆಲ್ಲರೂ ನಾವು ಎಲ್ಲೂ ಮತಮಾರ್ಪಾಟುಗಳು ನಡೆಯದಂತೆ ನೋಡುತ್ತಿದ್ದೇವೆಂದು ಹೇಳುತ್ತಿದ್ದರೂ ಹಿಂದೂಗಳ ಸಂಖ್ಯೆ ಹೇಗೆ ಕಡಿಮೆಯಾ ಗುತ್ತಿದೆಯೆನ್ನುವ ಪ್ರಶ್ನೆಗೆ ಅವರ ಹತ್ತಿರ ಸರಿಯಾದ ಉತ್ತರವಿಲ್ಲ. ಅವರು ಕೆಲಸ ಮಾಡುತ್ತಿರುವ ಮಾತು ವಾಸ್ತವವೇ! ಆದರೇ ಕವಚ, ಆಯುಧ ಇಲ್ಲದ ಸೈನಿಕನು ಯುದ್ಧ ಮಾಡುತ್ತಿರುವಂತೆ ಕೆಲಸ ಮಾಡುತ್ತಿದ್ದಾರೆ. ನಿಮ್ಮ ಕಾರ್ಯಕ್ರಮಗಳು ಯಾವುವು? ಮತಮಾರ್ಪಾಟುಗಳನ್ನು ಹೇಗೆ ತಡೆಗಟ್ಟುತ್ತೀರ? ಎಂದು ಪ್ರಶ್ನಿಸಿದರೇ ಅವರು ಹೇಳುವ ಸಮಾಧಾನ ಸ್ವಲ್ಪ ಆಶ್ಚರ್ಯ ವನ್ನುಂಟುಮಾಡಿದೆ. ಅವರು ಏನು ಹೇಳಿದ್ದಾರೆಂದರೆ! ಎಲ್ಲಿ ಕ್ರೈಸ್ತವ ಸಭೆಗಳು ನಡೆದರೂ ನಾವು ಅವುಗಳನ್ನು ಭಂಗಪಡಿಸುತ್ತಿದ್ದೇವೆ. ಮತಮಾರ್ಪಾಟುಗಳನ್ನು ಮಾಡುವ ಫಾದರ್, ಪಾಸ್ಟರ್‌ಗಳನ್ನು ದಂಡಿಸಿ, ಬೆದರಿಸಿ ಇನ್ನು ಎಲ್ಲೂ ಕೂಡಾ ನೀವು ಅಂತಹ ಕಾರ್ಯಗಳು ಮಾಡಬಾರದೆಂದು ಎಚ್ಚರಿಸಿ ಕಳುಹಿಸಿದ್ದೇವೆ. ಕೆಲವು ಕಡೆ ಅವರನ್ನು ಚೆನ್ನಾಗಿ ಹೊಡೆದಿದ್ದೇವೆ. ಅದರಿಂದ ಎಲ್ಲೂ ಕ್ರೈಸ್ತವ ಬೋಧನೆಗಳು ಹೇಳುವುದಿಲ್ಲವೆಂದು ಹೇಳಿದ್ದಾರೆ. ನಾವಿದ್ದೇವೆ ಆದ್ದರಿಂದ ಇದಕ್ಕೂ ಮೊದಲಿನಹಾಗೆ ಈಗ ಬೀಧಿಗಳಲ್ಲಿ ಅವರ ಮತ ಪ್ರಚಾರ ಮಾಡುತ್ತಿಲ್ಲ. ನಮ್ಮಿಂದಲೇ ಅವರ ಸಭೆಗಳು ಕಡಿಮೆಯಾಗಿವೆ ಎಂದು ಹೇಳಿದ್ದಾರೆ. ಈ ವಿಧವಾಗಿ ಪ್ರಜೆಗಳು ಇತರ ಮತಗಳೊಳಗೆ ಹೋಗುತ್ತಿದ್ದರೇ, ಹಿಂದೂ

ಸಂಘಗಳು ಮಾತ್ರ ಸ್ವಮತ ರಕ್ಷಣೆಯಲ್ಲಿ ಬಿದ್ದುಹೋಗಿದ್ದಾರೆ. ಇತರೆ ಮತದವರು ತಮ್ಮ ಮತಗಳೊಳಗೆ ಹಿಂದೂಗಳನ್ನು ಎಳೆದುಕೊಳ್ಳುವ ಪ್ರಯತ್ನ ಮಾಡುತ್ತಿದ್ದರೆ ಹಿಂದೂಗಳು ಮಾತ್ರ ಇತರರನ್ನು ತಮ್ಮ ಮತದೊಳಗೆ ಆಕರ್ಷಿಸಿಕೊಳ್ಳುವುದು ಇಲ್ಲ ಆದರೆ, ಇರುವವರನ್ನು ಹೋಗದಂತೆ ನೋಡಿಕೊಳ್ಳುತ್ತಾ ಸ್ವಯಂ ರಕ್ಷಣೆಯಲ್ಲಿ ಬಿದ್ದುಹೋಗಿದ್ದಾರೆ. ಕ್ರೈಸ್ತರಾಗಲಿ, ಮುಸ್ಲಿಮ್‌ರಾಗಲಿ ಸ್ವಯಂರಕ್ಷಣೆಯಲ್ಲಿ ಇಲ್ಲ. ಅವರು ಇತರರನ್ನು ಆಕರ್ಷಿಸುವುದರಲ್ಲಿ ಲಗ್ನವಾಗಿದ್ದಾರೆ. ಅವರು ಮಾಡುವ ಕೆಲಸವನ್ನು ನೀವು ಮಾಡಬಹುದಲ್ಲವೆ! ಅವರು ಆಕರ್ಷಣೆಯಲ್ಲಿದ್ದರೇ, ನೀವು ಏಕೆ ರಕ್ಷಣೆಯಲ್ಲಿ ಇದ್ದೀರೆಂದು ಕೇಳಿದರೇ "ನಾವು ಮತಮಾರ್ಪಾಟುಗಳನ್ನು ಪ್ರೋತ್ಸಾಹಿಸುವುದಿಲ್ಲ" ಎಂದು ಅನ್ನುತ್ತಿದ್ದಾರೆ. ಇನ್ನೂ ಕೆಲವರು ಅವರಿಗೆ ಆ ಕೆಲಸ ಕೈಲಾಗುತ್ತಿದೆ ಆದ್ದರಿಂದ ಅವರು ಹಾಗೆ ಮಾಡುತ್ತಿದ್ದಾರೆ. ನಮಗೆ ಆ ಕೆಲಸ ಮಾಡುವುದಕ್ಕೆ ಕೈಲಾಗಲಿಲ್ಲ, ನಾವು ಮಾಡಲಿಲ್ಲ. ಕೈಲಾದರೇ ನಾವು ಇತರರನ್ನು ಹಿಂದೂಗಳಾಗಿ ಬದಲಾಯಿಸದೆ ಹೋದರೂ ಇತರ ಮತಗಳೊಳಗೆ ಹೋದ ಹಿಂದೂಗಳನ್ನಾದರೂ ಪುನಃ ಹಿಂದೂ ಮತದೊಳಗೆ ಬದಲಾಯಿಸಬೇಕೆಂದು ಅಂದುಕೊಳ್ಳುತ್ತಿದ್ದೇವೆ. ಆದರೇ ಅವರು ಬದಲಾಯಿಸಿ ದಂತೆ ಒಬ್ಬರನ್ನು ಕೂಡಾ ಬದಲಾಯಿಸಲಾರದೆ ಹೋಗುತ್ತಿದ್ದೇವೆ ಎಂದು ಅನ್ನುತ್ತಿದ್ದಾರೆ.

ಇತರ ಮತದವರು ಹಿಂದೂಗಳನ್ನು ತಮ್ಮ ಮತಗಳೊಳಗೆ ಹೇಗೆ ಬದಲಾಯಿಸುತ್ತಿದ್ದಾರೆ? ಆ ಕೆಲಸವನ್ನು ಹಿಂದೂಗಳು ಏಕೆ ಮಾಡಲಾರದೆ ಇದ್ದಾರೆಂದು ಪರಿಶೀಲಿಸಿ ನೋಡಿದರೇ, ಅವರ ಹತ್ತಿರ ಇರುವುದೇನು? ಇವರ ಹತ್ತಿರ ಇಲ್ಲದಿರುವುದೇನು ಎಂದು ಯೋಚಿಸಿ ನೋಡಿದರೆ, ಈ ವಿಧವಾಗಿ ಅರ್ಥವಾಗುತ್ತಿದೆ. "ಒಬ್ಬ ವ್ಯಕ್ತಿಯನ್ನು ಒಳ್ಳೆಯ ಮಾತುಗಳಿಂದ ಬದಲಾಯಿಸ ಬಹುದು ಆದರೆ ಕೆಟ್ಟ ದೂಷಣೆಯಿಂದ ಎಂದಿಗೂ ಬದಲಾಯಿಸಲಾರೆವು" ಎನ್ನುವುದು ಹಿರಿಯರು ಹೇಳಿದ ಸೂತ್ರ. ಜೀವನವೊಂದರ ಅನುಭವವಿರುವ ಹಿರಿಯರು "ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದಾಗುತ್ತದೆ" ಎನ್ನುವ ಮಾತನ್ನು ಕೂಡಾ ಹೇಳುತ್ತಿದ್ದರು. ಇವುಗಳನ್ನು ಗ್ರಹಿಸಿದ ನಂತರ ಹಿಂದೂಗಳ

ಹತ್ತಿರ ಬಾಯಿಂದ ಬರುವ ಮಾತಿಗಿಂತ ಇತರ ಮತದವರ ಬಾಯಿಂದ ಬರುವ ಮಾತು ಹಿಂದೂಗಳಿಗೆ ಇಷ್ಟವಾಗಿರುವುದರಿಂದ ಹಿಂದೂ ಪ್ರಜೆಗಳು ತಮ್ಮ ಹಿಂದೂ ಮತವನ್ನು ಬಿಟ್ಟು ಇತರ ಮತಗಳಲ್ಲಿ ಸೇರಿಹೋಗುತ್ತಿದ್ದಾರೆಂದು ತಿಳಿಯುತ್ತಿದೆ. ಅಂತಹ ಮಾತುಗಳು ಇತರ ಮತಗಳ ಹತ್ತಿರ ಯಾವುವು ಇವೆ? ಹಿಂದೂಗಳ ಬಾಯಿಯಿಂದ ಬರುವ ಮಾತುಗಳಿಗಿಂತ ಕ್ರೈಸ್ತರ ಮಾತುಗಳಾಗಲೀ, ಮುಸ್ಲಿಮ್‌ರ ಮಾತುಗಳಾಗಲೀ ಸಾಮಾನ್ಯ ಹಿಂದೂ ಪ್ರಜೆಗಳನ್ನು ಹೇಗೆ ಆಕರ್ಷಿಸುತ್ತಿವೆ. ಹಿಂದೂ ಸಮಾಜದಿಂದ ಹಿಂದೂ ಪ್ರಜೆಗಳನ್ನು ಹಿಂದೂ ಸಮಾಜ ಮಾತುಗಳು ಏಕೆ ದೂರ ಮಾಡುತ್ತಿವೆ? ಎಂದು ಸ್ವಲ್ಪ ತಿಳಿದುಕೊಳ್ಳಬೇಕೆಂದುಕೊಂಡ ಸಮಯದಲ್ಲಿಯೇ, ಹಿಂದೂಗಳಾಗಿರುವ ನಾವು ಕೂಡಾ, ಹಿಂದೂ ಸಮಾಜದಲ್ಲಿ ನಾವು ಹಿರಿಯರು ಎಂದು ಹೇಳಿಕೊಳ್ಳುತ್ತಾ, ಹಿಂದೂ ಮತರಕ್ಷಣೆ ಸಂಸ್ಥೆಗಳು ಏರ್ಪಡಿಸಿಕೊಂಡವರ ಮಾತುಗಳ ಪ್ರಭಾವಕ್ಕೆ, ಕೈಚಳಕದ ದಾಳಿಗೆ ನಾವು "ಬುದ್ಧಿ ಇಲ್ಲದೆ ಹಿಂದೂಗಳಾಗಿ ಬದುಕುತ್ತಿದ್ದೇವೆ, ಇಂತಹ ಹಿಂದೂಮತದಲ್ಲಿ ಇರಬಾರದು" ಎನ್ನುವ ನಿರ್ಣಯಕ್ಕೆ ಬಂದಿದ್ದೇವೆ. ನನ್ನನ್ನು ಅನುಸರಿಸುತ್ತಿರುವ ಕೆಲವು ಜನ ಹಿಂದೂಗಳು ನಮ್ಮೊಂದಿಗೆ ಅದೇ ನಿರ್ಣಯಕ್ಕೆ ಬಂದಿದ್ದಾರೆ. ಅದೇ ಸಮಯದಲ್ಲಿ ಮುಸ್ಲಿಮ್ ಸಂಘಗಳ ಮಾತುಗಳು ನಮ್ಮನ್ನು ಚೆನ್ನಾಗಿ ಆಕರ್ಷಿಸಿವೆ. ಅದರೊಂದಿಗೆ ಒಂದು ಹೆಸರಿರುವ ಮುಸ್ಲಿಮ್ ಆಧ್ಯಾತ್ಮಿಕ ಸಂಸ್ಥೆಯಿಂದ 'ಇಸ್ಲಾಮಿಕ್ ರೀಸರ್ಚ್ ಸೆಂಟರ್' ಅವರೊಂದಿಗೆ ಸಂಪರ್ಕಿಸಿ ನಾವು, ನನ್ನೊಂದಿಗೆ ಕೆಲವು ಸಾವಿರ ಮಂದಿ ಒಂದೇಬಾರಿಗೆ ಮುಸ್ಲಿಮ್‌ರಾಗಿ ಬದಲಾಗಬೇಕೆಂದು ನಿರ್ಣಯಿಸಿಕೊಂಡಿದ್ದೇವೆ. ಹಾಗೆ ಬದಲಾದರೇ ಹಿಂದೂ ಸಂಘಗಳ ವಿಧಾನ ಬದಲಾಗುತ್ತದೆಂದುಕೊಂಡಿದ್ದೇವೆ. ಹಿಂದೂ ಸಂಘಗಳಿಂದಲೇ ಹಿಂದೂಗಳು ಇತರೆ ಮತಗಳೊಳಗೆ ಹೋಗುತ್ತಿದ್ದಾ ರೆಂದು ಲೋಕಕ್ಕೆ ತಿಳಿಯುತ್ತದೆಂದುಕೊಂಡಿದ್ದೇವೆ. ಆ ಸಮಯದಲ್ಲಿ ಹೈದರಾಬಾದ್‌ನಲ್ಲಿ ಬಷೀರ್‌ಬಾಗ್ ಸೆಂಟರ್‌ನಲ್ಲಿರುವ ಪ್ರೆಸ್‌ಕ್ಲಬ್‌ನಲ್ಲಿ ಪ್ರೆಸ್‌ಮೀಟ್ ಇಟ್ಟು ನಾವು ಈ ಕಾರಣದಿಂದ ಮತವನ್ನು ಬದಲಾಗುತ್ತಿದ್ದೇವೆಂದು ನಮ್ಮ ಅನುಚರರು ಹೇಳುವುದು ಕೂಡಾ ನಡೆದಿದೆ.

ಈ ವಿಧವಾಗಿ ಒಂದು ಸಂದರ್ಭದಲ್ಲಿ ಮುಸ್ಲಿಮ್ ಮತಕ್ಕೆ ಹತ್ತಿರವಾಗಿ ಹೋದ ನಾವು ಕೊನೆಯ ಸಮಯದಲ್ಲಿ ನಮ್ಮ ನಿರ್ಣಯವನ್ನು ಬದಲಾಯಿಸಿಕೊಂಡಿದ್ದೇವೆ. ಆ ನಿರ್ಣಯವನ್ನು ಬದಲಾಯಿಸಿಕೊಳ್ಳುವುದಕ್ಕೆ ಒಂದೇ ಒಂದು ಕಾರಣವಿದೆ. ಅದಕ್ಕು ಮೊದಲು ನಾನೇ ಸ್ವತಃವಾಗಿ **"ಮತ ಮಾರ್ಪಾಟು ಮಹಾಪಾಪ"** ಎನ್ನುವ ಗ್ರಂಥವನ್ನು ಬರೆದಿದ್ದೇನೆ. ಆ ಗ್ರಂಥವನ್ನು ಬರೆದ ನಾನು, ಮತಮಾರ್ಪಾಟುಗಳನ್ನು ವಿರೋಧಿಸುವ ನಾನು, ಯಾರ ಮಾತುಗಳಿಗೋ ಮತವನ್ನು ಬದಲಾದರೇ 'ಕುಡುಕನ ಮಾತುಗಳಿಗೆ ಸೀತೆಯನ್ನು ರಾಮನು ಬಿಟ್ಟಂತಿರುತ್ತದೆಂದು' ಹಾಗೆ ಮಾಡುವುದರಲ್ಲಿ ನಮ್ಮ ಪ್ರಜ್ಞೆ (ಬುದ್ಧಿ) ಕೆಲಸ ಮಾಡದಂತೇ ಅಲ್ಲವೇ! ಎಂದು, ನಾವು ಹಿಂದೂಮತದಲ್ಲೇ ಇದ್ದು ಈ ದಿನ 'ಛೀ' ಎಂದವರೊಂದಿಗೇ 'ಸೈ' ಎನಿಸಿಕೊಳ್ಳಬೇಕೆಂದುಕೊಂಡಿದ್ದೇನೆ. ಆದ್ದರಿಂದ ಆ ದಿನ ಮುಸ್ಲಿಮ್‌ಆಗಿ ಬದಲಾಗದೆ ಹೋಗಿದ್ದೇನೆ. ಹಿಂದೂ ಸಮಾಜದಲ್ಲಿ ನನ್ನನ್ನು ಗುರುವಾಗಿ ನಂಬಿದವರು, ನನ್ನ ಬೋಧನೆಗಳನ್ನು ಅನುಸರಿಸುವವರು ಸಾವಿರ ಮಂದಿ ಇದ್ದಾರೆ. ಆ ದಿನ ನಾನು ಬದಲಾಗಿದ್ದರೇ ನನ್ನೊಂದಿಗೆ ಎಲ್ಲರೂ ಬದಲಾಗುತ್ತಿದ್ದರು. ಅಂತಹ ಪರಿಸ್ಥಿತಿ ತಂದುಕೊಂಡ ಹಿಂದೂ ಸಂಘಗಳು ಎಷ್ಟು ಬುದ್ಧಿ ಕಡಿಮೆ ಇರುವವೋ ನೋಡಿರಿ. ಅಂತಹ ಹಿಂದೂ ಸಂಘಗಳು ಹಿಂದೂ ಮತವನ್ನು ರಕ್ಷಿಸುತ್ತಿವೆಯೋ, ಭಕ್ಷಿಸುತ್ತಿವೆಯೋ ನೀವೇ ಯೋಚಿಸಿರಿ!

ನಾವು ಅದ್ವೈತ ಸಿದ್ಧಾಂತದ ಹಾಗೆ **"ತ್ರೈತ ಸಿದ್ಧಾಂತ"**ವನ್ನು ಪ್ರಚಾರ ಮಾಡಿದರೇ ಜ್ಞಾನ ತಿಳಿಯದ ಹಿಂದೂಗಳು ನಮ್ಮನ್ನು ಕ್ರೈಸ್ತ ಪ್ರಚಾರಕರನ್ನಾಗಿ ವರ್ಣಿಸಿದ್ದಾರೆ. ನಾವು ಹಿಂದೂಗಳಲ್ಲಿ ಮುಖ್ಯವಾದ ವ್ಯಕ್ತಿಯಾಗಿದ್ದೇವೆಂದು ತಿಳಿದರೂ ಯಾವ ಜ್ಞಾನವೂ ತಿಳಿಯದವರು ನಮ್ಮನ್ನು, ನಮ್ಮ ಗ್ರಂಥಗಳನ್ನು ಅವಮಾನಿಸುವುದೇ ಅಲ್ಲದೆ ನಾವು ಬರೆದ 'ತ್ರೈತ ಸಿದ್ಧಾಂತ ಭಗವದ್ಗೀತೆ'ಯನ್ನು ಬೆಂಕಿ ಇಟ್ಟು ಸುಡುವುದು ನಡೆದಿದೆ. ಹಿಂದೂ ಮುಸುಗಿನಲ್ಲಿ ಕ್ರೈಸ್ತ ಮತವನ್ನು ಪ್ರಚಾರ ಮಾಡುತ್ತಿದ್ದಾರೆಂದು ನಮ್ಮನ್ನು ಅರೋಪಿಸುವುದು ನಡೆದಿದೆ. ಇದೆಲ್ಲಾ ಗುಂತಕಲ್ಲು ಪಟ್ಟಣದಲ್ಲಿ ನಡೆದ ಸಮಾಚಾರ ಗತದಲ್ಲಿ ಕೆಲವರಿಗೆ ತಿಳಿದೇ

ಇರುತ್ತದೆ. ಅಂತಹ ಮೂರ್ಖರು ಪ್ರೇರೇಪಿಸಿದರೇ ಅವರ ಪ್ರೇರಣೆಗೆ ಹಿಂದೂ ಮತವನ್ನು ಬಿಡಬೇಕೆಂದುಕೊಂಡರೂ ನಂತರ ಕೊನೆಯ ಕ್ಷಣದಲ್ಲಿ ನಮ್ಮ ನಿರ್ಣಯವನ್ನು ಬದಲಾಯಿಸಿಕೊಂಡಿದ್ದೇವೆ. ಇದನ್ನನುಸರಿಸಿ ಬಹಳ ಜನ ಹಿಂದೂಗಳಿಗೆ, ಹಿಂದೂ ಸಂಘಗಳು ಯಾವ ಕೆಲಸಮಾಡುತ್ತಿವೆಯೋ ಅರ್ಥವಾಗಿಹೋಗಿವೆ. ಯಾವ ಮಾತ್ರ ದೈವಜ್ಞಾನವನ್ನು ತಿಳಿಯದವರನ್ನು ಹಿಂದೂ ಸಂಘಗಳಲ್ಲಿ ಸದಸ್ಯರನ್ನಾಗಿ ನೇಮಿಸಿದರೆ ಇಂತಹ ಅನರ್ಥಗಳೇ ನಡೆಯುತ್ತವೆ.

ಈ ದಿನ ನಮ್ಮ ಬೋಧನೆಗಳನ್ನು ನೋಡಿ ಎಲ್ಲ ಮತದವರು ನಮ್ಮ ಕಡೆ ಆಕರ್ಷಿತರಾಗುತ್ತಿದ್ದಾರೆ. ಆದರೂ ನಾವು ಯಾರನ್ನೂ ಮತ ಬದಲಾಯಿಸಿಕೊಳ್ಳಿರೆಂದು ಹೇಳಲಿಲ್ಲ. ನಾವು ಈ ಮಧ್ಯಕಾಲದಲ್ಲಿ ಒಂದು ಪ್ರಕಟಣೆ ಮಾಡಿದ್ದೇವೆ. ಅದು ಏನೆಂದರೆ! **"ಮತಗಳು ನಿಷಿದ್ಧ, ನಿಷೇಧ. ಕುಲಗಳು ಅಹೇತುಕ, ಅಶಾಸ್ತ್ರೀಯ. ಕುಲಮತಗಳಿಗೆ ಅತೀತ ಭಾವನೆಗಳಿರುವವರು ನಮ್ಮ "ಪ್ರಬೋಧ ಸೇವಾ ಸಮಿತಿ"ಯಲ್ಲಿ ಸೇರಿರಿ"** ಎಂದು ಹೇಳಿದ್ದೇವೆ. ಈ ವಿಧವಾಗಿ ಪ್ರಜೆಗಳಿಗೆ ಜ್ಞಾನವನ್ನು ಹೇಳಿದರೇ ಪ್ರಜೆಗಳ ಭಾವನೆಗಳು ಬದಲಾಗಿಹೋಗುತ್ತವೆ ಆದರೆ ಹಿಂಸೆಯಿಂದ, ದೌರ್ಜನ್ಯದಿಂದ ಯಾರನ್ನೂ ಬದಲಾಯಿಸಲಾರೆವು. ಈ ದಿನ ನಮ್ಮ ಜ್ಞಾನವನ್ನು ಕೇಳಿದ ಮುಸ್ಲಿಮ್‌ರು, ಕ್ರೈಸ್ತರು, ಹಿಂದೂಗಳು ಮೂವರು ನಮ್ಮ ಹತ್ತಿರಕ್ಕೆ ಬರುವುದು ನಡೆದಿದೆ. ನಮ್ಮನ್ನು ನಿಂದಿಸಿದ ನಿಮ್ಮ ಕಡೆ ಇತರ ಮತದವರು ಒಬ್ಬರಾದರೂ ಬಂದಿದ್ದಾರಾ? ಕನಿಷ್ಟ ಹಿಂದೂ ಗಳಾದರೂ ಬಂದಿದ್ದಾರಾ? ದೇವರ ಜ್ಞಾನವನ್ನು ಹೇಳಿದರೇ ಯಾರಾದರೂ ಬರುತ್ತಾರೆ ಆದರೆ, ರಾಜಕೀಯ ಪಾರ್ಟಿಯಂತೆ ಮಾತನಾಡಿದರೇ ಯಾರೂ ಬಾರದಿದ್ದರೂ ನಿಮ್ಮನ್ನು ಹೀಯಾಳಿಸಿಕೊಳ್ಳುತ್ತಾರೆ. ಈ ದಿನ ಹಿಂದೂ ಸಮಾಜದಲ್ಲಿ ರಕ್ಷಣೆ ಸಂಘಗಳೆನ್ನುವ ಹೆಸರಿನಿಂದ ಎಷ್ಟೋ ಜನ ಇದ್ದರೂ, ಹಿಂದೂಗಳ ಸಂಖ್ಯೆ ಏಕೆ ಕಡಿಮೆಯಾಗುತ್ತಿದೆಯೋ ಹೇಳಬಲ್ಲಿರಾ? ನಮ್ಮ ಜ್ಞಾನವನ್ನು ಕೇಳಿದ ಯಾರಾದರೂ, ಎಲ್ಲಾದರೂ ಮತ ಬದಲಾಗಿದ್ದಾನೇನೋ ತೋರಿಸಬಲ್ಲಿರಾ? ನಮ್ಮ ಹತ್ತಿರವಿರುವ ಜ್ಞಾನ ಹಿಂದೂ ಸಂಘಗಳ ಹತ್ತಿರ

ಇಲ್ಲ ಆದ್ದರಿಂದ ಹಿಂದೂಗಳನ್ನು ಮತಮಾರ್ಪಾಟುಗಳಿಂದ ನಿಲ್ಲಿಸಲಾರದೆ ಹೋಗುತ್ತಿದ್ದಾರೆ. ನಿಮ್ಮ ಬಳಿ ಇಲ್ಲದ ಜ್ಞಾನ ನಮ್ಮ ಬಳಿ ಇದೆ. ಆದ್ದರಿಂದ ನಮ್ಮ ಬೋಧನೆಗಳು ಕೇಳಿದ ಯಾರೇ ಆಗಲೀ ಮತವನ್ನು ಬದಲಾಯಿಸಲಾರನು.

ಇಂದೂತ್ವದ ಹೆಸರೊಂದಿಗೆ ಸಂಘಗಳನ್ನು ಇಟ್ಟುಕೊಂಡಷ್ಟು ಮಾತ್ರಕ್ಕೆ ಹಿಂದೂಗಳನ್ನು ಪರಮತಗಳ ಕಡೆ ಹೋಗದಂತೆ ನಿರೋಧಿಸಲಾರೆವು. ಇಂದೂ ಸಂಘಗಳಲ್ಲಿ ಇಂದೂ ಜ್ಞಾನವಿರಬೇಕು. ಇಂದೂ ಜ್ಞಾನದಿಂದಿ ಇಂದೂ ಧರ್ಮಗಳನ್ನು ಬೋಧಿಸಿದರೇ ಹಿಂದೂಗಳು ಹಿಂದೂಗಳಾಗಿಯೇ ಇರಬಲ್ಲರು. ಇಂದೂ ಮತ ಪೂರ್ವದಲ್ಲಿ ಎಷ್ಟು ದೊಡ್ಡದಾಗಿ ಇದ್ದಿತೋ ತಿಳಿಯಬಲ್ಲದು. ಗತ ಚರಿತ್ರೆ ಮರೆತುಹೋಗಿ ಎರಡು ಮೂರು ನೂರು ವರ್ಷಗಳ ಸಮಯದಲ್ಲಿ **"ಇಂದೂ"** ಪದ "ಹಿಂದೂ" ಪದವಾಗಿ ಬದಲಾಗಿದೆಯೆಂದು ತಿಳಿಯದವರು ಈ ದಿನ ನಾವು 'ಇಂದೂ' ಎನ್ನುವ ಪದವನ್ನು ಹೇಳಿದರೇ ಅದು ಕೂಡಾ ಪರಮತ ಎನ್ನುತ್ತಿದ್ದಾರೆ. ತನ್ನ, ಪರ ವ್ಯತ್ಯಾಸ ತಿಳಿಯದವರಾಗಿ ಈ ದಿನ ಹಿಂದೂಗಳು ಇದ್ದಾರೆ.

**42) ಪ್ರ :– ಈದಿನ ಭೂಮಿಮೇಲೆ ತಿಳಿದವನು, ತಿಳಿಯದವನು ನನ್ನದು ನಿಜವಾದ ಜ್ಞಾನ ಎಂದು ನಂಬುವಂತೆ ಹೇಳುತ್ತಿದ್ದಾರೆ. ಇನ್ನು ಮತ ವಿಷಯದೊಳಗೆ ಬಂದರೇ ಹಿಂದೂಗಳಿಗಿಂತ ನಮ್ಮದು ಉನ್ನತವಾದ ಜ್ಞಾನವೆಂದು ಮುಸ್ಲಿಮ್‌ರು, ಮುಸ್ಲಿಮ್‌ರಿಗಿಂತ ನಮ್ಮದೇ ನಿಜವಾದ ಜ್ಞಾನವೆಂದು ಕ್ರೈಸ್ತರು ವಾದಿಸುತ್ತಿರುವಾಗ ನಮ್ಮದು ಸನಾತನ ಧರ್ಮವೆಂದು, ಉಳಿದವುಗಳೆಲ್ಲವೂ ನಂತರ ಬಂದಿರುವವೆಂದು ಹಿಂದೂಗಳು ಹೇಳುತ್ತಿದ್ದಾರೆ. ಈ ರೀತಿಯಾಗಿ ನಮ್ಮದು ದೊಡ್ಡದು, ನಮ್ಮದು ದೊಡ್ಡದು ಎಂದು ಎಲ್ಲ ಮತದವರು ಅನ್ನುತ್ತಿರುವಾಗ, ಅವರಲ್ಲಿಯೇ ಕೆಲವರು ಕ್ರೈಸ್ತರು ನಾನು ನಿಜವಾದ ಜ್ಞಾನಿ ಎಂದರೆ, ಮುಸ್ಲಿಮ್‌ರು ನಮ್ಮ ಗ್ರಂಥದಲ್ಲಿನ ಜ್ಞಾನವೇ ನಿಜವಾದ ಜ್ಞಾನ ಅದನ್ನು ತಿಳಿದುಕೊಂಡ ನಾವೇ ನಿಜವಾದ ಜ್ಞಾನಿಗಳೆಂದು ಹೇಳುತ್ತಿದ್ದಾರೆ. ಇನ್ನು ಹಿಂದೂಗಳ ವಿಷಯಕ್ಕೆ ಬಂದರೆ ಹಿಂದೂ ಸಂಘಗಳಲ್ಲಿ ಜ್ಞಾನವೆಂದರೇ ಏನೋ ತಿಳಿಯದವರಿದ್ದರೂ, ಕೆಲವರು ಸ್ವಾಮೀಜಿಗಳು ಈ ಸಂಘಗಳೊಂದಿಗೆ ಸಂಬಂಧವಿಲ್ಲದೇ ಆಶ್ರಮಗಳನ್ನು ಸ್ಥಾಪಿಸಿಕೊಂಡು ಪ್ರತ್ಯೇಕವಾದ**

**ಪೀಠಗಳನ್ನು ಇಟ್ಟುಕೊಂಡು ಅವರಿಗೆ ತಿಳಿದಿರುವುದು ಅವರು ಹೇಳುತ್ತಾ ನಾನೇ ದೊಡ್ಡ ಜ್ಞಾನ ಇರುವವನೆಂದು ಹೊರಗೆ ಹೇಳದಿದ್ದರೂ ಒಳಗೆ ನನ್ನನ್ನು ಮೀರಿದವನಿಲ್ಲವೆಂದು ಅಂದುಕೊಳ್ಳುತ್ತಿದ್ದಾರೆ. ಇಷ್ಟು ಮಂದಿ ಇಷ್ಟು ಮತಗಳಲ್ಲಿ ಇಷ್ಟು ವಿಧಗಳ ಜ್ಞಾನಗಳು ಇರುವವರಿರುವಾಗ ಏನೂ ತಿಳಿಯದವನು ಇವರಲ್ಲಿ ಯಾರದು ನಿಜವಾದ ಜ್ಞಾನವೆಂದು ತಿಳಿಯಬೇಕು? ಯಾರ ಹತ್ತಿರಕ್ಕೆ ಹೋದರೇ ಅಸಲಾದ ದೈವಜ್ಞಾನ ಸಿಗುತ್ತದೆಂದು ಅಂದುಕೊಳ್ಳಬೇಕು? ಯಾರದು ನಿಜವಾದ ಜ್ಞಾನವೋ ಹೇಗೆ ತಿಳಿಯಬೇಕು?**

**ಉತ್ತರ :–** ಮನುಷ್ಯ ಇಂದ್ರಿಯಗಳ ಮೂಲಕ ತಿಳಿದುಕೊಳ್ಳುವ ವಿಷಯಗಳಲ್ಲಿ ಕಾಣಿಸುವವು, ಕೇಳಿಸುವವು ಎಂದು ಎರಡು ವಿಧಗಳು ಇವೆ. ಕಾಣಿಸುವವುಗಳನ್ನು ಯಾವುದು ಎಷ್ಟು ಎಂದು ಅಳೆಯುವುದಕ್ಕೆ ಅಳತೆಗಳು ಇವೆ. ದ್ರವ ಪದಾರ್ಥಗಳನ್ನು ಅಳೆಯುವವು, ಘನಪದಾರ್ಥಗಳನ್ನು ಅಳೆಯುವವು, ಶಕ್ತಿಯನ್ನು ಅಳೆಯುವವು ಗ್ಯಾಸ್ ವಾಯುವನ್ನು ಅಳೆಯುವವು ಅನೇಕ ವಿಧಗಳ ಅಳತೆಗಳು ಇವೆ. ಕೇಳಿಸುವವುಗಳಲ್ಲಿ ಯಾವುದು ದೊಡ್ಡದು, ಯಾವುದು ದೊಡ್ಡದು ಅಲ್ಲ ಎನ್ನುವುದಕ್ಕೆ ತಿಳಿಸುವ ಅಳತೆಯೂ ಸಹ ಇದೆ. ಹಾಗೆ ಶಬ್ದ ವಿಷಯದಲ್ಲಿ ಪರಿಜ್ಞಾನವನ್ನು ತಿಳಿಸುವುದನ್ನು ಶಾಸ್ತ್ರ ಎನ್ನುತ್ತಾರೆ. ಪ್ರಪಂಚದಲ್ಲಿ ಪ್ರತಿ ವಿಷಯ ಶಾಸ್ತ್ರ ಎನ್ನುವುದರೊಂದಿಗೆ ಅನುಸಂಧಾನ ಮಾಡಲ್ಪಟ್ಟಿರುತ್ತದೆ. ಆ ವಿಧವಾಗಿ ಪ್ರಪಂಚದಲ್ಲಿನ ಪ್ರಪಂಚ ಸಂಬಂಧ ಎಲ್ಲ ವಿಷಯಗಳಿಗು ಐದು ಶಾಸ್ತ್ರಗಳೊಂದಿಗೆ ಅನುಸಂಧಾನ ಮಾಡಲ್ಪಟ್ಟಿದೆ. ಆ ಐದು ವಿಷಯಗಳಿಗು ಸಂಬಂಧಿಸಿದ ಐದು ಶಾಸ್ತ್ರಗಳನ್ನು ವರಸೆ ಕ್ರಮವಾಗಿ **ಒಂದು ಗಣಿತ ಶಾಸ್ತ್ರ, ಎರಡು ಖಗೋಳ ಶಾಸ್ತ್ರ, ಮೂರು ರಸಾಯನ ಶಾಸ್ತ್ರ, ನಾಲ್ಕು ಭೌತ ಶಾಸ್ತ್ರ, ಐದು ಜ್ಯೋತಿಷ್ಯ ಶಾಸ್ತ್ರ ಎನ್ನುವವು ಇವೆ**. ಈ ಐದು ಪ್ರಪಂಚಕ್ಕೆ ಸಂಬಂಧಿಸಿದ ಶಾಸ್ತ್ರಗಳೆಂದು ನಿರ್ಣಯಿಸಲ್ಪಟ್ಟಿವೆ. ಈಗ ನಮಗೆ ಬೇಕಾಗಿರುವುದು ಪ್ರಪಂಚ ವಿಷಯವಲ್ಲ, ಪರಮಾತ್ಮ ವಿಷಯ. ಪ್ರಪಂಚ ವಿಷಯಗಳು ಐದು ಆದಾಗ ಅವುಗಳಿಗೆ ಐದು ಶಾಸ್ತ್ರಗಳಿವೆ. ಪರಮಾತ್ಮ ವಿಷಯ ಒಂದೇ ಆಗಿರುವುದರಿಂದ ಅದಕ್ಕೆ ಒಂದೇ ಶಾಸ್ತ್ರ ಇದೆ.

ಪ್ರಪಂಚ ವಿಷಯದಲ್ಲಾಗಲೀ, ಪರಮಾತ್ಮ ವಿಷಯದಲ್ಲಾಗಲೀ ಯಾವುದು ದೊಡ್ಡದು, ಯಾವುದು ದಿಬ್ಬ, ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂದು ತೀರ್ಮಾನಿಸಿ ಹೇಳುವುದಕ್ಕೆ ಶಾಸ್ತ್ರ ಆಧಾರವಾಗುತ್ತದೆ. ಕೋರ್ಟಿನಲ್ಲಿ ಕಾನೂನನ್ನು ಅನುಸರಿಸಿ ಯಾವುದು ಅಪರಾದ, ಯಾವುದು ಅಪರಾದ ಅಲ್ಲ ಎಂದು ತೀರ್ಮಾನಿಸಿ ಹೇಳಿದಂತೆ ಶಾಸ್ತ್ರವನ್ನನುಸರಿಸಿ ಯಾವ ವಿಷಯವನ್ನಾದರೂ ತೀರ್ಮಾನಿಸಿ ಹೇಳಬಹುದು. ಶಾಸ್ತ್ರ ಆಧಾರ ಇಲ್ಲದೆ ಹೋದರೇ ನನ್ನದು ದೊಡ್ಡದು ನನ್ನದು ದೊಡ್ಡದು ಎನ್ನುವ ವಾದ ಬಗೆಹರಿಯುವುದಿಲ್ಲ. 'ಯಾರು ದೊಡ್ಡವ' ಎನ್ನುವ ವಿಷಯವನ್ನು ಮೊಂಡರಂತೆ ವಾದಿಸುತ್ತಾರೆ. ಶಾಸ್ತ್ರದಿಂದಾದರೇ ಅದು ಯಾವುದಾದರೂ ಒಂದು ಕ್ಷಣದಲ್ಲಿ ತೀರ್ಮಾನಿಸಬಹುದು. ದೇಶದಲ್ಲಿ ಎಂತಹ ತಗಾದೆಗಳು ಬಾರದಂತಿರುವುದಕ್ಕೆ ಒಂದು ವೇಳೆ ಬಂದರೂ ಅವುಗಳನ್ನು ತೀರ್ಮಾನಿಸಿ ಹೇಳುವುದಕ್ಕೆ ಮೊದಲೇ ಶಾಸ್ತ್ರವನ್ನು ನಿರ್ಣಯಿಸಿ ತಯಾರು ಮಾಡಿ ಇಟ್ಟಿದ್ದಾನೆ.

ಒಂದು ವಿಷಯವನ್ನು ಕುರಿತು ಹೀಗಿದೆಯೆಂದು ಹೇಳುವುದು ಆ ವಿಷಯಕ್ಕೆ ಸಂಬಂಧಿಸಿದ ವಿಷಯ ಜ್ಞಾನ ಎನ್ನುತ್ತೇವೆ. ಒಂದು ಜ್ಞಾನವನ್ನು ಬೇರ್ಪಡಿಸಿ ನೋಡುವುದಾದರೆ ಅಥವಾ ಅದನ್ನು ಪ್ರತ್ಯಕ್ಷವಾಗಿ ಅನುಭವಿಸಿ ನೋಡಿದರೂ ಅದನ್ನು 'ವಿಜ್ಞಾನ' ಎನ್ನುತ್ತೇವೆ. ಜ್ಞಾನ ಪ್ರಪಂಚದ್ದಾಗಲೀ, ಪರಮಾತ್ಮದ್ದಾಗಲೀ ಅದನ್ನು ಅನುಭವಿಸಿದಾಗಾಗಲಿ, ಪ್ರತ್ಯಕ್ಷವಾಗಿ ನೋಡಿದಾಗಾಗಲೀ, ಅದರಲ್ಲಿ ಸತ್ಯ ಹೊರಬೀಳುತ್ತದೆ ಅದನ್ನೇ ವಿಜ್ಞಾನ ಎಂದು ಹೇಳುತ್ತೇವೆ. ಇನ್ನೂ ವಿವರವಾಗಿ ಹೇಳಿದರೇ ಒಂದು ವಿಷಯಕ್ಕೆ ಸಂಬಂಧಿಸಿದ ಸತ್ಯವನ್ನು ವಿಜ್ಞಾನವೆಂದೂ ಅಥವಾ ಶಾಸ್ತ್ರೀಯವೆಂದೂ ಹೇಳಬಹುದು. ವಿಜ್ಞಾನವೆಂದರೇ ಸೈನ್ಸ್ ಎಂದು ಕೆಲವರು ಹೇಳುತ್ತಿರುವಾಗ ಕೇಳಿದ್ದೇವೆ. ಆ ಮಾತು ವಾಸ್ತವ! ಸೈನ್ಸ್ ಎಂದು ಇಂಗ್ಲೀಷ್ ಭಾಷೆಯಲ್ಲಿ ಹೇಳಿದರೂ, ವಿಜ್ಞಾನವೆಂದು ಕನ್ನಡ ಭಾಷೆಯಲ್ಲಿ ಹೇಳಿದರೂ ಅದನ್ನೇ ಇನ್ನೊಂದು ರೂಪದಲ್ಲಿ **'ಶಾಸ್ತ್ರ'** ಎನ್ನುತ್ತಿದ್ದೇವೆ. ಶಾಸ್ತ್ರದಲ್ಲಿ ಎರಡು ವಿಧಗಳಾಗಿ ಕೆಲವರು ವರ್ಣಿಸುವುದು ಕೂಡಾ ನಡೆದಿದೆ. ಪ್ರಪಂಚ ವಿಷಯಗಳಿಗೆ ಸಂಬಂಧಿಸಿದ ಶಾಸ್ತ್ರಗಳಿಗೆ **"ಸಾಧಾರಣ**

**ಶಾಸ್ತ್ರವೆಂದೂ" ಅಥವಾ "ಸಾಮಾನ್ಯ ಶಾಸ್ತ್ರವೆಂದೂ"** ಹೇಳುವುದು ನಡೆಯುತ್ತಿದೆ. ಪ್ರಪಂಚ ವಿಷಯಗಳಿಗೆ ಸಂಬಂಧಿಸಿದ ಐದು ಶಾಸ್ತ್ರಗಳನ್ನು ಐದು ಸಾಮಾನ್ಯ ಶಾಸ್ತ್ರಗಳಾಗಿ ಹೇಳಬಹುದು. ಆದರೇ ದೇವರ ವಿಷಯಕ್ಕೆ ಸಂಬಂಧಿಸಿದ ಶಾಸ್ತ್ರವನ್ನು **"ಅಸಮಾನ್ಯ ಶಾಸ್ತ್ರ"** ಎಂದು ಹೇಳಬಹುದು. ಸಾಮಾನ್ಯ ಎನ್ನುವ ಪದವನ್ನು ವಿಶೇಷವಾಗಿ ಹೇಳುವುದನ್ನು 'ಅಸಮಾನ್ಯ" ಎಂದು ಅನ್ನುತ್ತಿದ್ದಾರೆ. ಹಾಗೆ ಎನ್ನುವುದರಿಂದ ಅದು ಐದು ಶಾಸ್ತ್ರಗಳ ಹಾಗೆ ಇರುವುದಲ್ಲವೆಂದು ವಿಶೇಷವಾದ ಶಾಸ್ತ್ರವೆಂದು ತಿಳಿಯುತ್ತಿದೆ. ಸಾಮಾನ್ಯ ಶಾಸ್ತ್ರವನ್ನು ವಿಜ್ಞಾನ ಶಾಸ್ತ್ರ ಎಂದು ಕನ್ನಡದಲ್ಲಿ ಹೇಳಿದರೂ, ಇಂಗ್ಲೀಷ್ ಭಾಷೆಯಲ್ಲಿ ಸೈನ್ಸ್ ಎಂದರೂ, ಅಸಮಾನ್ಯ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅಥವಾ ದೇವರ ಜ್ಞಾನವನ್ನು **"ಸೂಪರ್ ಸೈನ್ಸ್"** ಎಂದು ಹೊಸ ಹೆಸರಿನಿಂದ ಕರೆಯುತ್ತಿದ್ದಾರೆ.

ಇಂಗ್ಲೀಷ್ ಭಾಷೆಯಲ್ಲಿ ಸೈನ್ಸ್, ಸೂಪರ್ ಸೈನ್ಸ್ ಎಂದು ಎರಡು ವಿಧಗಳು ಹೇಳಿದರೂ ಕನ್ನಡದಲ್ಲಿ ಸಾಮಾನ್ಯ, ಅಸಮಾನ್ಯ ಎಂದು ಪ್ರಪಂಚ ಜ್ಞಾನವನ್ನು, ಪರಮಾತ್ಮ ಜ್ಞಾನವನ್ನು ಬೇರ್ಪಡಿಸಿ ಹೇಳಿದರೂ ಕೆಲವು ಕಡೆ ಜ್ಞಾನ ಎನ್ನುವ ಪದವನ್ನು ವಿಜ್ಞಾನವಾಗಿ ಮಾಡಿ ಹೇಳಿದ್ದಾರೆ. ಭಗವದ್ಗೀತೆ ನಮಗೆ ಎಂದರೆ ಪ್ರಜೆಗಳೆಲ್ಲರಿಗೂ, ಸರ್ವ ಮಾನವರಿಗೂ ಪ್ರಥಮ ದೈವಗ್ರಂಥ. ಭಗವದ್ಗೀತಾ ಜ್ಞಾನವನ್ನು ಭಗವಂತನಾದ ಕೃಷ್ಣನು 5000 ವರ್ಷಗಳ ಪೂರ್ವದಲ್ಲಿ ಹೇಳುವುದು ನಡೆದಿದೆ. ಆಗ ಗ್ರಂಥ ರೂಪವಾಗಿ ಬರೆದ ಬರಹದಲ್ಲಿ **"ಜ್ಞಾನ", "ವಿಜ್ಞಾನ"** ಎನ್ನುವ ಪದಗಳು ಅಲ್ಲೇ ಕಾಣಿಸಿವೆ. ಈಗ ಭಗವದ್ಗೀತೆಯಲ್ಲಿನ ಸಪ್ತಮಾಧ್ಯಾಯವಾದ ವಿಜ್ಞಾನ ಯೋಗದಲ್ಲಿ ಎರಡನೆ ಶ್ಲೋಕದಲ್ಲಿ ಮತ್ತು ನವಮಾಧ್ಯಾಯವಾದ ರಾಜವಿದ್ಯಾ ರಾಜಗುಹ್ಯ ಯೋಗವೆನ್ನುವ ಅಧ್ಯಾಯದಲ್ಲಿ ಮೊದಲ, ಎರಡನೆ ಶ್ಲೋಕಗಳಲ್ಲಿ ಈ ವಿಧವಾಗಿ ಹೇಳಿದ್ದಾರೆ ನೋಡಿರಿ.

**ವಿಜ್ಞಾನಯೋಗ 2ನೇ ಶ್ಲೋಕ...**

**ಶ್ಲೋ॥ ಜ್ಞಾನಂ ತೇಹಂ ಸವಿಜ್ಞಾನ ಮಿದಂ ವಕ್ಷ್ಯಾಮ್ಯ ಶೇಷತಃ ।**
**ಯಜ್ಞಾತ್ವಾ ನೇಹ ಭೂಯೋನ್ಯತ್ ಜ್ಞಾತವ್ಯ ಮವ ಶಿಷ್ಯತೇ ॥**

**ಭಾವಾರ್ಥ :–** "ಜ್ಞಾನವನ್ನು ನಿನಗೆ ನಾನು ವಿಜ್ಞಾನ ಸಹಿತವಾಗಿ ತಿಳಿಸುತ್ತೇನೆ. ಯಾವುದನ್ನು ತಿಳಿದ ನಂತರ ಯಾವುದನ್ನು ತಿಳಿಯಬೇಕಾದ ಅವಶ್ಯವಿಲ್ಲವೋ ಅಂತಹದ್ದನ್ನು ಕುರಿತು ಹೇಳುವೆನು ಕೇಳು"

**ರಾಜವಿದ್ಯಾ ರಾಜಗುಹ್ಯ ಯೋಗ 1ನೇ ಶ್ಲೋಕ...**

**ಶ್ಲೋ॥ ಇದಂ ತುತೇ ಗುಹ್ಯತಮಂ ಪ್ರವಕ್ಷ್ಯಾ ಮ್ಯನ ಸೂಯವೇ ।**

**ಜ್ಞಾನಂ ವಿಜ್ಞಾನ ಸಹಿತಂ ಯಜ್ಞಾತ್ವಾ ಮೋಕ್ಷ್ಯಸೇ ಶುಭಾತ್ ॥**

**ಭಾವಾರ್ಥ :–** ಇದು ಅತಿ ರಹಸ್ಯವಾದ **ಜ್ಞಾನವನ್ನು ವಿಜ್ಞಾನ ಸಹಿತವಾಗಿ** ವಿವರಿಸಿ ಹೇಳುವೆನು ಕೇಳು. ಇದರಿಂದ ನಿನ್ನಲ್ಲಿನ ಅಜ್ಞಾನವೆಲ್ಲವೂ ಹೋಗಿ ಜ್ಞಾನ ಉಂಟಾಗುತ್ತದೆ. ನೀನು ಅಸೂಯೆ ಇಲ್ಲದಂತೆ ಕೇಳು.

**ರಾಜವಿದ್ಯಾ ರಾಜಗುಹ್ಯ ಯೋಗ 2ನೇ ಶ್ಲೋಕ...**

**ಶ್ಲೋ॥ ರಾಜವಿದ್ಯಾ ರಾಜಗುಹ್ಯಂ ಪವಿತ್ರ ಮಿದ ಮುತ್ತಮ್ ।**

**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥**

**ಭಾವಾರ್ಥ :–** ಭೂಮಿಮೇಲೆ ಇರುವ ವಿದ್ಯೆಗಳೆಲ್ಲವುಗಳಲ್ಲಿ ದೊಡ್ಡ ವಿದ್ಯೆಯಾದ, ರಹಸ್ಯಗಳಲ್ಲಿ ದೊಡ್ಡ ರಹಸ್ಯವಾದ, ಉತ್ತಮವಾದ ಮತ್ತು ಪವಿತ್ರವಾದುದು. **ಪ್ರಪಂಚದಲ್ಲಿ ಪ್ರತ್ಯಕ್ಷ ಅನುಭವಕ್ಕೆ ಬರುವುದು,** ಅವ್ಯಯವಾದುದು. ಅನುಷ್ಠಾನಕ್ಕೆ ತಕ್ಕಂತಹ ಧರ್ಮವನ್ನು ಕುರಿತು ತಿಳಿಸುವೆನು ಕೇಳು.

ಮೇಲೆ ಹೇಳಿರುವ ಈ ಎರಡು ಶ್ಲೋಕಗಳಲ್ಲಿ ಜ್ಞಾನವನ್ನು ವಿಜ್ಞಾನ ಸಹಿತವಾಗಿ ಎಂದು ಹೇಳುವುದಾಗಿದೆ. ವಿಜ್ಞಾನ ಎಂದರೆ ಸತ್ಯ ಎಂದು, ಪ್ರತ್ಯಕ್ಷ ಅನುಭವಕ್ಕೆ ಬರುವುದೆಂದು ಹೇಳಿಕೊಂಡಿದ್ದೇವೆ. ಅದೇ ವಿಷಯವನ್ನೇ ಎರಡು ಶ್ಲೋಕಗಳಲ್ಲಿ ವಿಜ್ಞಾನ ಸಹಿತವಾಗಿ ಎಂದು ಹೇಳಿ ಮೂರನೆ ಶ್ಲೋಕದಲ್ಲಿ ಪ್ರಪಂಚದಲ್ಲಿ ಪ್ರತ್ಯಕ್ಷ ಅನುಭವಕ್ಕೆ ಬರುವುದು ಎಂದು ಕೂಡಾ ಹೇಳಿದ್ದಾರೆ. ಪ್ರತ್ಯಕ್ಷ ಅನುಭವ ಎಂದರೆ ಸತ್ಯವೆಂದೇ ಅಲ್ಲವೆ ಅರ್ಥ. ಈ ವಿಧವಾಗಿ

ಭಗವದ್ಗೀತೆಯಲ್ಲಿ ಕೂಡಾ ಭಗವಂತನ ಮೂಲಕ ದೇವರು ಶಾಸ್ತ್ರ ಎಂದರೇ ವಿಜ್ಞಾನವೆಂದೂ, ವಿಜ್ಞಾನವೆಂದರೇ ಸತ್ಯವೆಂದು ತಿಳಿಸುವುದಾಗಿದೆ. ಈಗ ಈ ವಿಧಾನವನ್ನು ಆಧಾರ ಮಾಡಿಕೊಂಡು ಯಾರು ಹೇಳುವ ಮಾತು ಸತ್ಯವೋ, ಯಾರು ಹೇಳುವ ಮಾತು ಅಸತ್ಯವೋ ತೀರ್ಮಾನಿಸಿ ಹೇಳಬಹುದು. ಅಂದರೆ ಶಾಸ್ತ್ರಾಧಾರದಿಂದ ಯಾವುದು ಸತ್ಯವೋ, ಯಾವುದು ಅಸತ್ಯವೋ ನಿರ್ಣಯಿಸಿ ಹೇಳಬಹುದು.

ಪೂರ್ವದಲ್ಲಿ ಒಬ್ಬ ವೃದ್ಧನು ತನ್ನ ಜೀವನದ ಅನುಭವದಿಂದ ಒಂದು ಮಾತನ್ನು ಹೇಳುತ್ತಿದ್ದನಂತೆ. "ಅನುಭವಕ್ಕೆ ಬರುವುದೆಲ್ಲಾ ಸತ್ಯ. ಅನುಭವಕ್ಕೆ ಬಾರದಿರುವುದೆಲ್ಲಾ ಅಸತ್ಯ" ಎಂದು ಎನ್ನುತ್ತಾ ಇದ್ದನು. ಸತ್ಯ ಶಾಸ್ತ್ರ. ಶಾಸ್ತ್ರ ಅಲ್ಲದಿರುವುದು ಅಸತ್ಯವೆಂದು ಆ ವೃದ್ಧನ ಮಾತನ್ನನುಸರಿಸಿ ಹೇಳಬಹುದು. ಜ್ಞಾನವನ್ನು ಒಬ್ಬನು ಹೇಳುತ್ತಾ ನನ್ನ ಜ್ಞಾನ ಎಲ್ಲದಕ್ಕಿಂತ ದೊಡ್ಡದೆಂದು ಹೇಳುತ್ತಿದ್ದನಂತೆ. ಆತನು ಹೇಳುವ ಜ್ಞಾನದ ಪ್ರಕಾರ ನಡೆದು ನೋಡಿದಾಗ ಅದು ತಪ್ಪೋ ಒಪ್ಪೋ ಎಂದು ತಿಳಿದುಹೋಗುತ್ತದಲ್ಲವೆ! ಪ್ರಪಂಚದಲ್ಲಿ ತಪ್ಪು ಒಪ್ಪುಗಳನ್ನು ಕುರಿತು ಸತ್ಯಾಸತ್ಯಗಳನ್ನು ಕುರಿತು, ಶಾಸ್ತ್ರ ಅಶಾಸ್ತ್ರಗಳನ್ನು ಕುರಿತು ಒಂದು ಮಾತನ್ನು ನಾಣ್ನುಡಿಯಾಗಿ ಇಂದಿನ ಕಾಲದಲ್ಲಿ ಕೂಡಾ ಅಲ್ಲಲ್ಲಿ ಹೇಳುವುದು ಕೇಳಿದ್ದೇವೆ. ಆದರೇ ಆ ಮಾತನ್ನು ಅವರು ರೂಢೀ ಪದವಾಗಿ ಹೇಳುತ್ತಿದ್ದಾರೇ ಹೊರತು ಅರ್ಥಸಹಿತವಾಗಿ ಹೇಳಲಿಲ್ಲವೆಂದು ತಿಳಿದುಹೋಗಿದೆ. ಪೂರ್ವದಲ್ಲಿ ಈ ಮಾತನ್ನು ಅರ್ಥದಿಂದ ಕೂಡಿಕೊಂಡ ಭಾವದಿಂದ ಹೇಳುತ್ತಿದ್ದರು. **"ಕುಂಬಾರರ ಮದುಮಗಳು ದಿಬ್ಬದ ಮೇಲೆ ಬಂದಾಗ ತಿಳಿಯುತ್ತದೆ!"** ಎನ್ನುತ್ತಿದ್ದರು. ಹಾಗೆ ಏಕೆ ಅನ್ನುತ್ತಿದ್ದರೆಂದರೆ, ಒಂದು ಊರಿನಲ್ಲಿ ಕುಂಬಾರರ ಮನೆಯಲ್ಲಿ ಮದುವೆ ನಡೆದಿದೆಯಂತೆ. ಆಗ ಆ ಮದುಮಗಳಿಗೆ ಸಂಬಂಧಿಸಿದ ವ್ಯಕ್ತಿ ಮದುಮಗಳಿಗೆ ಬಹಳ ಉದ್ದ ಕೂದಲಿವೆಯೆಂದು, ಅಂದವಾದ ಉದ್ದವಾದ ಜಡೆ ಇರುವವಳು ಎಂದು ಹೇಳುತ್ತಿದ್ದನಂತೆ. ಮದುವೆಯಾದ ಆ ದಿನ ರಾತ್ರಿಗೆ ಮೆರವಣಿಗೆ ನಡೆಯುತ್ತದೆ ಆದ್ದರಿಂದ, ಆ ಮೆರವಣಿಗೆ ನಡೆಯುವ ಹಾದಿಯಲ್ಲಿ ಎತ್ತರವಾದ ಮಣ್ಣಿನ ಕುಪ್ಪೆ ಇತ್ತು, ಮದುಮಗಳು ಮದುಮಗ ಮೆರವಣಿಗೆಯಲ್ಲಿ

ಆ ಮಣ್ಣಿನ ಕುಪ್ಪೆ ಹತ್ತಿ ಬರಬೇಕಾಗಿರುತ್ತದೆ. ಆಗ ಮದುಮಗಳನ್ನು ಚೆನ್ನಾಗಿ ನೋಡಬಹುದು. ಆಕೆಗಿರುವ ಉದ್ದನೆಯ ಜಡೆಯನ್ನು ನೋಡಬಹುದೆಂದು ಆ ಊರಿನಲ್ಲಿರುವವರಂದುಕೊಂಡರಂತೆ. ಹಾಗೆ ಅಂದುಕೊಳ್ಳುವುದರಲ್ಲಿ **"ಕುಂಬಾರರ ಮದುಮಗಳು ದಿಬ್ಬದ ಮೇಲೆ ಬಂದಾಗ ತಿಳಿಯುತ್ತದೆ"** ಎಂದು ಅಂದುಕೊಂಡರಂತೆ. ಆ ಮಾತು ಶಾಶ್ವತವಾಗಿ ನಿಂತುಹೋಗಿದೆ. ಮದುಮಗಳ ಸಂಬಂಧಿಕರೊಬ್ಬರು ಮದುಮಗಳಿಗೆ ಉದ್ದನೆಯ ಜಡೆ ಇದೆ ಎಂದು ಹೇಳುವ ಮಾತು ನಿಜ ಆಗಬಹುದು, ಸುಳ್ಳೂ ಆಗಬಹುದು. ಪ್ರತ್ಯಕ್ಷವಾಗಿ ನೋಡಿದಾಗ ಆ ಮಾತಿನಲ್ಲಿನ ಸತ್ಯ ತಿಳಿದುಹೋಗುತ್ತದಲ್ಲವೆ! ಸಾಯಂಕಾಲ ಮೆರವಣಿಗೆ ನಡೆಯುವಾಗ ಎಲ್ಲರೂ ನೋಡಬೇಕೆಂದು ಬಂದಿದ್ದಾರೆ. ಸ್ವಲ್ಪ ಹೊತ್ತಿಗೆ ಮೆರವಣಿಗೆ ಮಣ್ಣಿನ ದಿಬ್ಬದ ಹತ್ತಿರಕ್ಕೆ ಬಂದಿತು. ಮದುಮಗಳು ಎತ್ತರವಾಗಿರುವ ದಿಬ್ಬೆ ಹತ್ತುವುದರಿಂದ ಎಲ್ಲರಿಗೂ ಚೆನ್ನಾಗಿ ಕಾಣಿಸುತ್ತದೆಂದು ಮಣ್ಣಿನ ದಿಬ್ಬ ಹತ್ತಿರ ಬಹಳ ಜನ ಕಾದುಕೊಂಡು ನೋಡುತ್ತಿದ್ದರು. ಆಗ ಮದುಮಗಳು, ಮದುಮಗ ಇಬ್ಬರು ದಿಬ್ಬವನ್ನು ಹತ್ತಿದರು. ದಿಬ್ಬ ಹತ್ತಿ ಒಂದು ನಿಮಿಷ ಎಲ್ಲರೂ ನೋಡುವಂತೆ ನಿಂತುಕೊಂಡು ಕೂಡಲೇ ಇಳಿಯುವುದಕ್ಕೆ ಆರಂಭಿಸಿದರು. ಆಗ ಮದುಮಗಳು ಕಾಲುಜಾರಿ ಕೆಳಗೆ ಬೀಳುವುದು ತಲೆಮೇಲೆ ಇಟ್ಟಿರುವ ಕೃತ್ರಿಮ ಕೂದಲುಗಳು ಕಳಚಿ ಜಡೆಯೊಂದಿಗೆ ಕೆಳಗೆ ಬಿದ್ದು ಹೋಗುವುದು ನಡೆಯಿತು. ಆಗ ಮದುಮಗಳು ಕೂದಲುಗಳನ್ನು ಕುರಿತು ಹೇಳಿದ ಮಾತು ಅಸತ್ಯವೆಂದು ಪ್ರತ್ಯಕ್ಷ ಪ್ರಮಾಣವಾಗಿ ತಿಳಿದುಹೋಯಿತು.

ಯಾವುದಾದರೂ ಪ್ರತ್ಯಕ್ಷವಾಗಿ ನಡೆಯುವ ಸತ್ಯವೇ ಶಾಸ್ತ್ರವೆಂದು, ವಿಜ್ಞಾನವೆಂದೂ ಹೇಳುತ್ತಿದ್ದರು. ಯಾವುದು ಪ್ರತ್ಯಕ್ಷ ಅನುಭವಕ್ಕೆ ಬರುವುದೋ ಅದೇ ಸತ್ಯವೆಂದೂ, ಸತ್ಯ ಯಾವುದೋ ಅದೇ ವಾಸ್ತವವೆಂದು, ದೇವರು ಹೇಳಿದ ಜ್ಞಾನ ಸತ್ಯವೇ ಆಗುವುದರಿಂದ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವು ದೆಂದು ಹೇಳುತ್ತಿದ್ದೇವೆ. ಇದೆಲ್ಲಾ ತಿಳಿದ ದೇವರು ತನ್ನ ಜ್ಞಾನವನ್ನು ಹೇಳುವಾಗ ಮನುಷ್ಯರು ಗ್ರಹಿಸುವಂತೆ ನಾನು ಸತ್ಯಸಮೇತವಾಗಿ ನನ್ನ ಜ್ಞಾನವನ್ನು ಹೇಳುತ್ತಿದ್ದೇನೆಂದು ಬಹಳ ಸಲ ಹೇಳಿದ್ದಾನೆ. ಅಂತಿಮ ದೈವಗ್ರಂಥವಾದ

ಖುರಾನ್ ಗ್ರಂಥದಲ್ಲಿ ಸೂರಾ5, ಆಯತ್ 48ರಲ್ಲಿ ಹೀಗೆ ಹೇಳಿದ್ದಾನೆ ನೋಡಿರಿ.

**(5-48) "ಓ ಪ್ರವಕ್ತಾ! ನಾವು ಈ ಗ್ರಂಥವನ್ನು ನಿನ್ನ ಮೇಲೆ ಸತ್ಯದೊಂದಿಗೆ ಅವತರಿಸುವಂತೆ ಮಾಡಿದ್ದೇವೆ. ಇದು ಪೂರ್ವ ಗ್ರಂಥಗಳಲ್ಲಿ ಉಳಿದಿರುವ ಸತ್ಯವನ್ನು ಧೃಢಪಡಿಸುತ್ತಿದೆ. ಮತ್ತು ಅವುಗಳಲ್ಲಿ ಇರುವ ಸತ್ಯಾಸತ್ಯಗಳನ್ನು ಪರಿಷ್ಕರಿಸುತ್ತದೆ. ಆದ್ದರಿಂದ ನೀನು ಅಲ್ಲಾಹ್ ಅವತರಿಸುವಂತೆ ಮಾಡಿದ ಈ ಶಾಸನದ ಪ್ರಕಾರ ಅವರ ಮಧ್ಯೆ ತೀರ್ಪು ಮಾಡು ಮತ್ತು ನಿನ್ನ ಹತ್ತಿರಕ್ಕೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಕೋರಿಕೆಗಳನ್ನು ಅನುಸರಿಸಬೇಡ".**

ಇಲ್ಲಿ ದೇವರು ತನ್ನ ಜ್ಞಾನವನ್ನು ತಿಳಿಸುತ್ತಾ ತನ್ನದು ಶಾಸ್ತ್ರಬದ್ಧವಾದ ಜ್ಞಾನವೆಂದು ಹೇಳುವುದಕ್ಕೆ ಸತ್ಯಸಮೇತವಾದ ಜ್ಞಾನವೆಂದು ವರ್ಣಿಸಿ ಹೇಳಿದ್ದಾನೆ. ಸತ್ಯದಿಂದ ಕೂಡಿಕೊಂಡ ಜ್ಞಾನ ಎಂದು ಹೇಳುವುದರಲ್ಲಿ ಇದೇ ನಿಜವಾದ ಜ್ಞಾನವೆಂದು ಹೇಳಿದಂತಾಗಿದೆ. ನೀನು ಕೇಳಿದ ಪ್ರಶ್ನೆಯಲ್ಲಿ ಎಷ್ಟೋ ಜನ ತಮ್ಮ ಜ್ಞಾನವನ್ನು ದೊಡ್ಡದೆಂದು ಹೇಳುತ್ತಿದ್ದಾರೆಂದು, ಯಾವುದು ನಂಬಬೇಕೆಂದು ಕೇಳಿದ್ದೀಯ. ದೇವರು ಹೇಳಿದಂತೆ ಯಾವುದಾದರೇ ಸತ್ಯವಾದ ಜ್ಞಾನವೋ ಅದೇ ನಿಜವಾದ ದೊಡ್ಡ ಜ್ಞಾನವೆಂದು ನಂಬಬೇಕು. ಸತ್ಯಾ ಸತ್ಯಗಳನ್ನು ತಿಳಿಯುವುದಕ್ಕೆ ಪ್ರತ್ಯಕ್ಷ ಅನುಭವಗಳು ಸರಿಹೋಗುವವೆಂದು ಅವುಗಳನ್ನು ನೋಡಿ ಯಾವುದು ನಿಜವಾದ ಜ್ಞಾನವೋ ಗುರುತಿಸಬಹುದು. ಕುಂಬಾರರ ಮದುಮಗಳಿಗೆ ಜಡೆ ಉದ್ದ ಎನ್ನುವ ಮಾತು ಸತ್ಯವಾ! ಅಲ್ಲವಾ! ಎಂದು ತಿಳಿಯುವುದಕ್ಕೆ ಮದುಮಗಳು ದಿಬ್ಬದ ಮೇಲೆ ಬಂದಾಗ ಪ್ರತ್ಯಕ್ಷ ಅನುಭವದ ಮೂಲಕ ತಿಳಿದುಹೋಗಿದೆ ಅಲ್ಲವೆ! ಅದೇ ವಿಧವಾಗಿ! ಯಾವ ಮತದವ ನಾದರೂ, ಯಾವ ಕುಲದವನಾದರೂ 'ನನ್ನ ಜ್ಞಾನ ದೊಡ್ಡದು' ಎಂದು ಹೇಳಿದಷ್ಟು ಮಾತ್ರಕ್ಕೆ ಆ ಮಾತನ್ನು ಕೇಳಿದವರೆಲ್ಲರೂ ಆತನ ಮಾತು ಸತ್ಯವೆಂದು ನಂಬಬೇಕಾದ ಅವಶ್ಯಕವಿಲ್ಲ. ಕುಂಬಾರರ ಮದುಮಗಳನ್ನು ನೋಡಿದಂತೆ ನೋಡಿದಾಗ, ಅವರು ಹೇಳುವ ಮಾತಿನೊಳಗಿನ ವಿಧಾನಯಾವುದೋ

ಅನುಭವದಿಂದ ಹೊರಬೀಳುತ್ತದೆ. ಆಗ ಯಾರು ಜ್ಞಾನಿ, ಯಾರು ಅಜ್ಞಾನಿ ಎಂದು ಸುಲಭವಾಗಿ ತಿಳಿಯಬಹುದು.

ಈ ವಿಧಾನವನ್ನು ಮನುಷ್ಯರು ತಿಳಿಯಬೇಕೆಂದು, ಇತರರು ಹೇಳುವ ಮಾತುಗಳನ್ನು ಕೇಳಿ ಅವರು ಜ್ಞಾನಿಗಳೆಂದು ಮೋಸಹೋಗದಂತಿರುವುದಕ್ಕೆ ಯಾರು ಜ್ಞಾನಿಗಳೋ, ಯಾರು ಅಜ್ಞಾನಿಗಳೋ ತಿಳಿಯುವಂತೆ ತನ್ನ ವಾಕ್ಯದಲ್ಲಿ "ಸತ್ಯಸಮೇತ" ಎನ್ನುವ ಪದವನ್ನು ಬಳಸಿ ಎಲ್ಲರಿಗೂ ಕಣ್ತೆರೆಸಿದ್ದಾನೆ. ಈ ವಿಧಾನ ಅರ್ಥವಾಗುವುದಕ್ಕೆ ಭೂಮಿಮೇಲೆ ಎಷ್ಟು ದೊಡ್ಡ ಸ್ಥಾನದಲ್ಲಿ ಇರುವವನಾದರೂ, ಎಷ್ಟು ದೊಡ್ಡ ಹೆಸರುಪಡೆದಿದ್ದರೂ ಆತನನ್ನು ಸುಲಭವಾಗಿ ಗುರುತಿಸಿ ಆತನಲ್ಲಿನ ಜ್ಞಾನವೆಷ್ಟು ಎಂದು ನೋಡುವ ವಿಧಾನ ಅರ್ಥವಾಗುವುದಕ್ಕೆ ಅಂತಿಮ ದೈವ ಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 29, ಆಯತ್ 44ರಲ್ಲಿ ಬರೆದಿರುವುದನ್ನು ಈಗ ನೋಡೋಣ. **(29–44) "ಅಲ್ಲಾಹ್ ಆಕಾಶಗಳನ್ನು ಭೂಮಿಯನ್ನು ಸತ್ಯಬದ್ಧವಾಗಿ ಸೃಷ್ಟಿಸಿದ್ದಾನೆ. ಆಕಾಶಗಳನ್ನು ಭೂಮಿಯನ್ನು ಪರಮಾರ್ಥದಿಂದ ಸೃಷ್ಟಿಸಿದ್ದಾನೆಂದು ತಿಳಿದರೇ ಇದರಲ್ಲಿ ದೊಡ್ಡ ನಿದರ್ಶನ ಸಿಗುತ್ತದೆ"** ಎಂದು ಇದೆ. ಈ ವಾಕ್ಯದಲ್ಲಿ ಯಾವುದಾದರು ಜ್ಞಾನವಿದ್ದರೇ ಅದು ಸತ್ಯಬದ್ಧವಾಗಿ ಇರುತ್ತದೆಂದು ಎಲ್ಲರೂ ತಿಳಿಯುವಂತೆ ಈ ವಾಕ್ಯವನ್ನು ಹೇಳಿದ್ದಾನೆ. ಈ ವಿಧವಾಗಿ ಖುರಾನ್ ಗ್ರಂಥದಲ್ಲಿ ಬಹಳ ಕಡೆ 'ಸತ್ಯ' ಎನ್ನುವ ಪದವನ್ನು ಉಪಯೋಗಿಸುವುದರಿಂದ, ಸತ್ಯ ಪ್ರತ್ಯಕ್ಷವಾಗಿ ನಿರೂಪಣೆಗೆ ಬರುವುದು ಆದ್ದರಿಂದ, ಯಥಾರ್ಥ ವಿಷಯವಾಗಿ ಪ್ರತ್ಯಕ್ಷವಾಗಿ ನಡೆಯುತ್ತದೆ. ಆದ್ದರಿಂದ ಯಾರೂ ನಾವು ದೊಡ್ಡ ಜ್ಞಾನಿಗಳೆಂದು ಪ್ರಚಾರ ಮಾಡಿಕೊಂಡರೂ 'ಶಾಸ್ತ್ರಬದ್ಧತೆ' ಎನ್ನುವ ದೇವರ ಸತ್ಯದಿಂದ ಸುಲಭವಾಗಿ ಎದುರಿಗಿರುವವನು ಜ್ಞಾನಿಯೋ ಅಲ್ಲವೋ ತಿಳಿದುಹೋಗುತ್ತದೆ.

**43) ಪ್ರ :– ನೀವು ಇದಕ್ಕೂ ಮೊದಲು "ಕುಂಬಾರರ ಮದುಮಗಳು ದಿಬ್ಬದ ಮೇಲೆ ಬಂದಾಗ ತಿಳಿಯುತ್ತದೆ" ಎನ್ನುವ ಮಾತಲ್ಲಿ ಸ್ವಲ್ಪವೇ ಹೇಳಿದಂತಾಗಿದೆ. ಈ ಮಾತನ್ನು ಗಾದೆ ಮಾತಾಗಿ ಬಹಳ ಜನ ಹಳ್ಳಿಗಳಲ್ಲಿ ಬಳಸುವುದು ನಾನು**

**ಸಹ ನೋಡಿದ್ದೇನೆ. 'ಕುಂಬಾರರ ಮದುಮಗಳು' ಎನ್ನುವ ಹೆಸರನ್ನು ಏಕೆ ಬಳಸಿದ್ದಾರೆ? ಹೇಳಿರಿ.**

**ಉತ್ತರ :–** ಮದುವೆ ಎಂದರೆ 'ದೇವರು' ಎಂದು ಅರ್ಥ ಎಂದು ಬಹಳ ಸಲ ನಾವು ಹೇಳಿದ್ದೇವೆ. ಮದುಮಗ ಎಂದರೇ ದೇವರ ಮಗ ಎಂದು ಕೂಡಾ ಹೇಳಿದ್ದೇವೆ. ಒಂದು ಸಂದರ್ಭದಲ್ಲಿ ಭಗವಂತನನ್ನು ಕೂಡಾ ಮದುಮಗ ಎಂದು ಹೇಳುವುದು ನಡೆಯುತ್ತಿದೆ. ಅಷ್ಟೇ ಅಲ್ಲದೆ ಮದುಮಗ ಎಂದರೂ, ಮದುಮಗಳು ಎಂದರೂ ಮೋಕ್ಷವನ್ನು ಕೋರುವವನೆಂದು, ದೇವರೊಳಗೆ ಐಕ್ಯವಾಗುವುದಕ್ಕೆ ತಕ್ಕ ಜ್ಞಾನ ಸಮುಪಾರ್ಜನೆ ಮಾಡಿದವರೆಂದು ಅರ್ಥ. ದೇವರೊಳಗೆ ಐಕ್ಯವಾಗಬೇಕೆಂದು, ಮೋಕ್ಷ ಹೊಂದಬೇಕೆಂದು ಅವರು ಜ್ಞಾನಿಗಳಾಗಿದ್ದು ಯೋಗವನ್ನು ಆಚರಿಸುವವರಾಗಿ ಇರುವುದರಿಂದ ಅವರಲ್ಲಿ ಕರ್ಮಗಳನ್ನು ಸುಡುವ ಜ್ಞಾನಶಕ್ತಿ ತಯಾರಾಗಿರುತ್ತದೆ. ಆತ್ಮಶಕ್ತಿಯನ್ನು ಅಥವಾ ಜ್ಞಾನಶಕ್ತಿಯನ್ನು ಅಗ್ನಿಯಾಗಿ ಜ್ಞಾನಾಗ್ನಿಯಾಗಿ ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಅದೇ ಜ್ಞಾನಶಕ್ತಿಯನ್ನು ಆತ್ಮಶಕ್ತಿಯಾಗಿ ಕೂಡಾ ಹೇಳಬಹುದು. ಆತ್ಮಶಕ್ತಿಗೆ ಗುರುತಾಗಿ ಶರೀರದಲ್ಲಿ ಕೂದಲುಗಳು ಇವೆಯೆಂದು ಗತದಲ್ಲಿ **"ಕೂದಲು ಆತ್ಮಕ್ಕೆ ಗುರುತು"** ಎಂದು ಪ್ರವಚನವನ್ನು ಕೂಡಾ ಹೇಳಿದ್ದೇವೆ. ಯೋಗಿ ಆದವನು ಆತ್ಮಶಕ್ತಿಯನ್ನು ಅಂದರೆ ಜ್ಞಾನಾಗ್ನಿಯನ್ನು ಚೆನ್ನಾಗಿ ಸಂಪಾದಿಸಿಕೊಂಡು ಕರ್ಮವನ್ನು ಸುಟ್ಟುಕೊಳ್ಳುವ ಸಾಮರ್ಥ್ಯ ಹೊಂದಿರುತ್ತಾನೆ.

ಅದು ಪಕ್ಕಕ್ಕಿಟ್ಟು "ಕುಂಬಾರರು" ಎನ್ನುವ ಪದವನ್ನು ಏಕೆ ಬಳಸಿದ್ದೇವೆಂದರೇ, ಕುಂಬಾರರು ತಲೆಮೇಲೆ ಮಣ್ಣನು ಹೊತ್ತು ಹೊತ್ತು ತಲೆಮೇಲೆ ಕೂದಲುಗಳೆಲ್ಲವು ಉದುರಿ ಹೋಗಿರುತ್ತವೆ. ಕೂದಲುಗಳು ಇಲ್ಲದವರು ಎಂದು ತಿಳಿಸುವುದಕ್ಕೆ ಕುಂಬಾರರು ಎನ್ನುವ ಮಾತನ್ನು ಬಳಸಿದ್ದಾರೆ. ಕೆಲವರು ತಮ್ಮ ಹತ್ತಿರ ಯಾವ ಜ್ಞಾನವಿಲ್ಲದಿದ್ದರೂ ಜ್ಞಾನಶಕ್ತಿ ಇಲ್ಲದಿದ್ದರೂ, ತಾವು ಶಕ್ತಿ ಇರುವವರೆಂದು ಕರ್ಮವನ್ನು ಸುಟ್ಟುಕೊಂಡು ಕರ್ಮಇಲ್ಲದವರಾಗಿ ಇದ್ದೇವೆಂದು, ನಾವು ನಿಜವಾದ ಯೋಗಿಗಳೆಂದು ದೇವರಲ್ಲಿ ಐಕ್ಯವಾಗುವುದಕ್ಕೆ ಸಿದ್ಧವಾಗಿ ಇದ್ದೇವೆಂದು ಹೇಳಿಕೊಳ್ಳುತ್ತಿರುವರು. ಆದರೇ ಅಂತಹವರ ಹತ್ತಿರ ಯಾವ

ಜ್ಞಾನ ವಾಗಲೀ, ಜ್ಞಾನಶಕ್ತಿಯಾಗಲೀ ಇಲ್ಲದಂತಿರುತ್ತದೆಂದು ಹೇಳುವ ನಿಮಿತ್ತ ಕೂದಲುಗಳು ಇಲ್ಲದ ಕುಂಬಾರರ ಮದುಮಗಳನ್ನು ಹೇಳುವುದು ನಡೆದಿದೆ. ಜ್ಞಾನವಿಲ್ಲದಿದ್ದರೂ ಜ್ಞಾನ ಇರುವವರಂತೆ ಹೊರಗೆ ಹೇಳಿಕೊಳ್ಳುತ್ತಾ ಯೋಗಿಗಳ ಹಾಗೆ ನಟಿಸುತ್ತಿರುವರು. ಆದ್ದರಿಂದ ಕೂದಲುಗಳು ಇಲ್ಲದಿದ್ದರೂ ಮೇಲ್ನೋಟಕ್ಕೆ ಕಾಣಿಸುವಂತೆ ವಿಗ್ಗನ್ನು ಇಟ್ಟುಕೊಂಡ ಕುಂಬಾರರ ಮದುಮಗಳನ್ನು ಹೇಳಿದ್ದೇವೆ. ಇಲ್ಲದ ಜ್ಞಾನವಿದ್ದಂತೆ ಮೋಕ್ಷಕ್ಕೆ ಹತ್ತಿರವಾಗಿದ್ದಂತೆ ಹೇಳಿಕೊಳ್ಳುವವರನ್ನು ಕೂದಲುಗಳು ಇಲ್ಲದಿದ್ದರೂ ಉದ್ದನೆಯ ಜಡೆ ಇರುವ ಮದುಮಗಳೆಂದು ಪ್ರಚಾರ ಮಾಡಿದಂತೆ ಹೇಳಿಕೊಳ್ಳುತ್ತಿರುವರೆಂದು ಹೇಳಿದ್ದೇವೆ. ಯಾವಾಗಾದರೂ ಗಟ್ಟಿ ಸಮಸ್ಯೆ ಬಂದಾಗ ಅವರ ಹತ್ತಿರ ಯಾವ ಜ್ಞಾನವಿಲ್ಲವೆಂದು ತಿಳಿಯುವಂತೆ ಮಣ್ಣಿನ ದಿಬ್ಬ ಹತ್ತಿದಾಗ ಕೂದಲುಗಳು ಇಲ್ಲ ಎಂದು ತಿಳಿದಿದೆಯೆಂದು ಅರ್ಥವಾಗುವಂತೆ 'ದಿಬ್ಬವನ್ನು ಹತ್ತಿದ ಮದುಮಗಳನ್ನು ನೋಡಿದರೇ' ಎಂದು ವಾಕ್ಯದಲ್ಲಿ ಹೇಳಿದ್ದಾರೆ. ಒಟ್ಟಾರೆ ಈ ಗಾದೆಯೆಲ್ಲವೂ ಜ್ಞಾನದೊಂದಿಗೆ ಅನುಸಂಧಾನ ಮಾಡಲ್ಪಟ್ಟಿದೆ. ಆದ್ದರಿಂದ ತಲೆ ಕೂದಲುಗಳು ಇಲ್ಲದ ಕುಂಬಾರರ ಮದುಮಗಳನ್ನು ಹೇಳಬೇಕಾಗಿ ಬಂದಿದೆ.

**ದೇವರೊಳಗೆ ಐಕ್ಯ ಆಗಬೇಕೆಂದುಕೊಳ್ಳುವವನು = ಮದುಮಗ (ಮದುಮಗಳು)**

**ಜ್ಞಾನ ಇಲ್ಲದವರು = ಕೂದಲು ಇಲ್ಲದವರು.**

**ಜ್ಞಾನಿಗಳೆಂದು ಹೇಳಿಕೊಳ್ಳುವವರು = ಮೋಕ್ಷಕ್ಕಾಗಿ ಪ್ರಯತ್ನಿಸುವವರು.**

**ದಿಬ್ಬಯೆನ್ನುವ ಗಟ್ಟಿ ಸಮಸ್ಯೆಗಳು = ಕರ್ಮ ಪರೀಕ್ಷೆಗಳು, ರೋಗಗಳು ಬಂದಾಗ.**

**ದಿಬ್ಬದ ಮೇಲೆ ತಿಳಿದಿಲ್ಲವಾ! = ಕರ್ಮಗಳಿರುವಾಗ ತಿಳಿಯುತ್ತದಲ್ಲವೆ!**

ಈ ವಿಧವಾಗಿ ದೇವರು ತನ್ನ ಜ್ಞಾನವನ್ನು ವಿವರವಾಗಿ ತಿಳಿಯುವಂತೆ ಅನೇಕ ವಾಕ್ಯಗಳಲ್ಲಿ, ಗಾದೆಗಳಲ್ಲಿ, ಕಥೆಗಳಲ್ಲಿ ತಿಳಿಸಿದ್ದಾನೆ. ಇಲ್ಲಿಗೆ ಈ ಗಾದೆಮಾತನ್ನು ಪೂರ್ತಿಯಾಗಿ ವಿವರಿಸಿ ಹೇಳಿದಂತಾಗಿದೆ.

**44) ಪ್ರ :– ನಾನು ಸಂಪೂರ್ಣ ಜ್ಞಾನಿ ಎಂದು ಒಬ್ಬ ವ್ಯಕ್ತಿ ಪೂರ್ತಿ ಗರ್ವವನ್ನು ಹೊಂದಿದ್ದು ಮಾತನಾಡುತ್ತಿದ್ದಾನೆಂದುಕೋ! ಆಗ ಆ ವ್ಯಕ್ತಿಯನ್ನು ಜ್ಞಾನ ಇಲ್ಲದವನೆಂದು ಹೇಗೆ ನಿರೂಪಿಸಬಹುದು?**

**ಉತ್ತರ :–** ದೇವರು ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಜ್ಞಾನವೆನ್ನುವ ಅಗ್ನಿ ಇರುವವನು ತನ್ನ ಕರ್ಮವನ್ನು ಸುಟ್ಟುಹಾಕುವನು ಎಂದು ಹೇಳುತ್ತಾ, **"ಜ್ಞಾನಾಗ್ನಿ ಸರ್ವಕರ್ಮಾಣಿ"** ಎಂದಿದ್ದಾರೆ. ಇಲ್ಲಿ ದೇವರ ವಾಕ್ಯವನ್ನು ಅನುಸರಿಸಿ ಜ್ಞಾನ ಇರುವವನಾದರೇ ಅವನು ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವನು. ಹಾಗಲ್ಲದೆ ಒಂದು ಕರ್ಮವನ್ನು ಅನುಭವಿಸುತ್ತಿದ್ದಾನೆಂದರೇ ಅವನ ಹತ್ತಿರ ಜ್ಞಾನಾಗ್ನಿ ಇಲ್ಲದಂತೇ ಎಂದು ತಿಳಿಯುತ್ತಿದೆ. ಜ್ಞಾನಾಗ್ನಿ ಇರುವವನು ಶೇಕಡ ಇಪ್ಪತ್ತರಷ್ಟು ಕರ್ಮವನ್ನು ಅನುಭವಿಸಬಹುದು. ಉಳಿದಿರುವುದನ್ನು ಇಲ್ಲದಂತೆ ಮಾಡಿಕೊಳ್ಳಬಹುದು.

**45) ಪ್ರ :– ನೀವು, ಜ್ಞಾನವೆನ್ನುವ ಅಗ್ನಿ ಜ್ಞಾನ ತಿಳಿದವರ ಹತ್ತಿರ ಇರುತ್ತದೆಂದು, ಅದರಿಂದ ಅವರ ಕರ್ಮ ಸುಟ್ಟುಹೋಗುತ್ತದೆಂದು ಹೇಳುತ್ತಿದ್ದೀರಲ್ಲವೆ! ದೇವರ ಜ್ಞಾನ ಎಲ್ಲ ಮತಗಳಿಗು ಒಂದೇ ಆದಾಗ, ದೇವರು ಎಲ್ಲ ಮತದವರಿಗೂ ಒಬ್ಬನೇ ಆದಾಗ ಜ್ಞಾನಾಗ್ನಿ ಎನ್ನುವುದು ಹಿಂದೂ ಮತಕ್ಕೆ ಒಂದಕ್ಕೇ ಇರುತ್ತದಾ? ಉಳಿದ ಎರಡು ಮತಗಳಿಗು ಕೂಡಾ ಹಾಗೆಯೇ ಇರುತ್ತದಾ?**

**ಉತ್ತರ :–** ದೇವರು ಸರ್ವ ಪ್ರಪಂಚಕ್ಕೂ ಒಬ್ಬನೇ ಆದಾಗ, ಆತನ ಜ್ಞಾನವು ಕೂಡಾ ಸರ್ವ ಮಾನವರಿಗೂ ಒಂದೇ ಇರುತ್ತದೆ. ಒಂದೊಂದು ಮತಕ್ಕೆ ಒಂದೊಂದು ಜ್ಞಾನವಿರುವುದಿಲ್ಲ. ಸರ್ವ ಮಾನವರಿಗೂ ದೇವರು ಒಬ್ಬನೇ, ಜ್ಞಾನ ಒಂದೇ ಎಂದು ತಿಳಿಯಬೇಕು. ಮೊದಲ ದೈವಗ್ರಂಥವಾದ ಭಗವದ್ಗೀತೆ ಯಲ್ಲಿ ಹೇಳಿದ 'ಜ್ಞಾನಾಗ್ನಿ' ಎನ್ನುವುದೇ ಎಲ್ಲಾ ದೈವಗ್ರಂಥಗಳಲ್ಲಿ ಕೂಡಾ ಹೇಳಲಾಗಿದೆ. ಹಿಂದೂ ಧರ್ಮಗಳಲ್ಲಿ ಹೇಳಿದಂತೆ ಮನುಷ್ಯರ ಕರ್ಮಗಳನ್ನು ಜ್ಞಾನಾಗ್ನಿಯಿಂದ ಉಳಿದ ಎರಡು ಮತದವರು ಇಲ್ಲದಂತೆ ಮಾಡಿಕೊಳ್ಳಬಹುದು. ಅದರಲ್ಲಿ ಯಾವ ಸಂಶಯವೂ ಇಲ್ಲ.

**46) ಪ್ರ :– ಕ್ರೈಸ್ತವ ಮತದಲ್ಲಾಗಲೀ, ಮುಸ್ಲಿಮ್ ಮತದಲ್ಲಾಗಲೀ ಎಲ್ಲೂ 'ಜ್ಞಾನಾಗ್ನಿ' ಎನ್ನುವ ಮಾತೇ ಇಲ್ಲ. ಹಾಗಿರುವಾಗ ನಿಮ್ಮ ಮಾತು ನಿಜವೆನ್ನುತ್ತೀರಾ?**

**ಉತ್ತರ :–** ಇಂತಹ ಅನುಮಾನಗಳು ಮನುಷ್ಯರಿಗೆ ಬರುತ್ತವೆಂದೇ ತಿಳಿದು ಮುಂಚಿತವಾಗಿಯೇ ಈ ಗ್ರಂಥವನ್ನು **"ಯಾವುದು ನಿಜವಾದ ಜ್ಞಾನ?"** ಎನ್ನುವ ಹೆಸರಿನಿಂದ ಬರೆಯಬೇಕಾಗಿ ಬಂದಿದೆ. ನಾವು ಹೇಳುವುದು ನಿಜವಾದ ಜ್ಞಾನವಾ ಅಲ್ಲವಾ! ಎಂದು ತಿಳಿಯುವುದಕ್ಕೆ ಇದರಲ್ಲಿ ಕೆಲವು ಸೂತ್ರಗಳನ್ನು ಹೇಳಿದ್ದೇವೆ. ಅದರ ಪ್ರಕಾರ ನಾವು ಹೇಳುವುದಾಗಲೀ, ಇತರರು ಹೇಳುವುದಾಗಲೀ ಸರಿಯಾದ ಜ್ಞಾನವಾ ಅಲ್ಲವಾ! ಎಂದು ಸುಲಭವಾಗಿ ತಿಳಿಯಬಹುದು. ಭಗವದ್ಗೀತೆಯಲ್ಲಿ **'ಜ್ಞಾನಾಗ್ನಿ', 'ಕರ್ಮದಹನ'** ಎಂದು ಬರೆಯಲ್ಪಟ್ಟಿದೆ. ಉಳಿದ ಗ್ರಂಥಗಳಲ್ಲಿ ಕೂಡಾ ಈ ವಿಷಯವೇ ಇದೆ ಆದರೆ, ಅಲ್ಲಿ ಹೇಳಿದ ಪದಗಳಿಗು ಇಲ್ಲಿ ಹೇಳಿದ ಪದಗಳಿಗು ಸ್ವಲ್ಪ ವ್ಯತ್ಯಾಸ ಇರುವುದರಿಂದ ಉಳಿದ ಗ್ರಂಥಗಳಲ್ಲಿ ಹೇಳಲಿಲ್ಲವೇನೋ! ಅಂದುಕೊಳ್ಳುವುದು ನಡೆಯುತ್ತಿದೆ. ಉದಾಹರಣೆಗೆ ಒಂದು ವಾಕ್ಯವನ್ನು ನೋಡೋಣ. ಹುಡುಗಿ ನಿನ್ನ ವಯಸ್ಸೆಷ್ಟು? ಎಂದು ಒಂದು ಪ್ರಾಂತದಲ್ಲಿ ಕೇಳುತ್ತಾರೆ. ಇನ್ನೊಂದು ಪ್ರಾಂತದಲ್ಲಿ ಅವರಿಗೆ ಅಭ್ಯಾಸವಾದ ಭಾಷೆ ಪ್ರಕಾರ ವಯಸ್ಸು ನಿನಗೆಷ್ಟು ಹುಡುಗಿ? ಎಂದು ಕೇಳಿದ್ದಾರೆಂದುಕೊಳ್ಳಿ! ಮತ್ತೊಂದು ಪ್ರಾಂತದಲ್ಲಿ ಅಮ್ಮೀ ನಿನ್ನ ಈಡೆಷ್ಟು (ವಯಸ್ಸೆಷ್ಟು)? ಎಂದು ಕೇಳಿದ್ದಾರೆಂದುಕೊಳ್ಳಿ! ಮೂರು ಮಾತುಗಳಲ್ಲಿ ಭಾವ ಒಂದೇ! ವಯಸ್ಸನ್ನು ಕುರಿತು ಕೇಳುವ ಉದ್ದೇಶ ಹೊರತು ಅದರಲ್ಲಿ ಏನೂ ಇಲ್ಲ. ಆದರೇ ಮೂರು ಮಾತುಗಳು ಸ್ವಲ್ಪ ಬೇರೆಬೇರೆಯಾಗಿ ಇವೆ. ಚೆನ್ನಾಗಿ ಗಮನಿಸಿದರೇ ಎಲ್ಲಾ ಒಂದೇ ಪ್ರಶ್ನೆಯೇ ಎಂದು ತಿಳಿಯುತ್ತದೆ. ಯೋಚಿಸದೇ ಹೋದರೇ ಬೇರೆಬೇರೆ ವಾಕ್ಯಗಳೇನೋ! ಎನ್ನುವಂತೆ ಕಾಣಿಸುತ್ತವೆ. ಅದೇ ವಿಧವಾಗಿ 'ಜ್ಞಾನಾಗ್ನಿ' ಎನ್ನುವ ವಿಷಯ ಕೂಡಾ ಮೂರು ಗ್ರಂಥಗಳಲ್ಲಿ, ಮೂರು ವಿಧಗಳಾಗಿ ಬರೆದಿರುವುದರಿಂದ ಮೂರರಲ್ಲಿ ಹೇಳಿರುವುದು ಒಂದೇಯೆಂದು ಬಹಳ ಜನ ತಿಳಿಯದಂತಿದ್ದಾರೆ. ಭಗವದ್ಗೀತೆಯಲ್ಲಿ ಕರ್ಮದಹನ 'ಜ್ಞಾನಾಗ್ನಿ'ಯಿಂದ ಉಂಟಾಗುತ್ತದೆಂದು ಹೇಳಿದ್ದಾರೆ. ಬೈಬಲ್‌ಯೊಳಗೆ ಬರುವಷ್ಟರಲ್ಲಿ ಮೊದಲು

ಭಗವದ್ಗೀತೆಯಲ್ಲಿ ಹೇಳಿದವನೇ ಇಲ್ಲಿ ಬೈಬಲ್‌ನಲ್ಲಿ ಕೂಡಾ ಹೇಳಿದರೂ, ಹೇಳಿದ ವಿಧಾನ ಸ್ವಲ್ಪ ಬೇರೆಯಾಗಿರುವುದರಿಂದ, ಹೇಳಿದ ಜ್ಞಾನ ಒಂದೇ ಆದರೂ, ಅದನ್ನು ಮನುಷ್ಯ ಗುರುತಿಸಲಾರದೆಹೋಗಿದ್ದಾನೆ. ಬೈಬಲ್‌ನಲ್ಲಿ **"ಪಾಪ ಕ್ಷಮಾಪಣೆ"** ಎಂದು ಹೇಳಿದ್ದಾನೆ. ಕರ್ಮದಹನವನ್ನು "ಪಾಪಕ್ಷಮಾಪಣೆ" ಎಂದೂ, ಜ್ಞಾನಾಗ್ನಿಯಿಂದ ಎನ್ನುವ ಮಾತನ್ನು **"ನಿಬಂಧನೆ ರಕ್ತ"** ದಿಂದ ಎನ್ನುವುದರಿಂದ **ಜ್ಞಾನಾಗ್ನಿ** ಎಂದರೂ, **ನಿಬಂಧನೆ ರಕ್ತ** ಎಂದರೂ ಎರಡೂ ಒಂದೇಯೆಂದು ಮನುಷ್ಯ ತಿಳಿಯಲಾರದೆ ಹೋಗಿದ್ದಾನೆ. ಖುರಾನ್ ಗ್ರಂಥದೊಳಗೆ ಬರುವಷ್ಟರಲ್ಲಿ ಪಾಪ ಇಲ್ಲದಂತೆ ಹೋಗುವುದನ್ನೇ ಮತ್ತೊಂದು ವಿಧವಾಗಿ ಹೇಳುವುದರಿಂದ ಅದನ್ನು ಸ್ವಲ್ಪವಾದರೂ ಗುರುತಿಸಲಾರದೆ ಹೋಗಿದ್ದಾರೆ. ಖುರಾನ್ ಗ್ರಂಥದಲ್ಲಿ ದೇವರು ತನ್ನ ಕರುಣೆಯಿಂದ ನಿನ್ನ ಕರ್ಮಗಳನ್ನು ಇಲ್ಲದಂತೆ ಮಾಡುವೆನೆಂದು ಹೇಳುತ್ತಾ **"ದೇವರು ಕ್ಷಮಾಶೀಲನು", "ಎಂತಹ ಕರ್ಮವನ್ನಾದರೂ ದೇವರು ಕ್ಷಮಿಸಬಲ್ಲನು"** ಎಂದು ಹೇಳುವುದರಿಂದ ಮೊದಲು ಭಗವದ್ಗೀತೆಯಲ್ಲಿ ಹೇಳಿರುವುದಕ್ಕೂ, ಕೊನೆಯ ಗ್ರಂಥದಲ್ಲಿ ಹೇಳಿರುವುದಕ್ಕೂ ಎಷ್ಟೋ ವ್ಯತ್ಯಾಸ ಕಾಣಿಸುವುದರಿಂದ, ಅಲ್ಲಿ ಹೇಳಿರುವುದೇ ಇಲ್ಲಿ ಹೇಳಿದ್ದಾನೆಂದು ಯಾರೂ ಅರ್ಥಮಾಡಿಕೊಳ್ಳದೆ ಹೋಗಿದ್ದಾರೆ.

ಈ ವಿಧವಾಗಿ ಒಂದೇ ಜ್ಞಾನವೇ ಮೂರು ಗ್ರಂಥಗಳಲ್ಲಿ ಮೂರು ವಿಧಗಳಾಗಿ ಹೇಳಲ್ಪಡುವುದರಿಂದ ಅದನ್ನು ಬಹಳ ಜನ ಗುರುತಿಸದೆ ಅಲ್ಲಿ ಹೇಳಿರುವುದು ಬೇರೆ, ಇಲ್ಲಿ ಹೇಳಿರುವುದು ಬೇರೆಯೆಂದು ಅಂದುಕೊಳ್ಳುತ್ತಿದ್ದಾರೆ. ದೇವರು ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವನ್ನು ಹೇಳಿದ್ದಾನೆ ಹೊರತು ಬೇರೆ ಜ್ಞಾನವನ್ನು ಹೇಳಲಿಲ್ಲ. ಹಾಗೆಯೇ ಇನ್ನೊಂದು ವಿಷಯವನ್ನು ಗಮನಿಸಿದರೇ ದೇವರ ಜ್ಞಾನ ಬೇರೆಯಾಗಿ ಅರ್ಥಮಾಡಿಕೊಳ್ಳಬಾರದೆಂದು ತಿಳಿದುಹೋಗುತ್ತದೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಮೂವರು ಪುರುಷರನ್ನು ಕುರಿತು ಹೇಳುತ್ತಿದ್ದೇನೆಂದು **"ಕ್ಷರನು, ಅಕ್ಷರನು, ಪುರುಷೋತ್ತಮನು"** ಎನ್ನುವ ಮೂವರನ್ನು ಹೇಳಿದ್ದಾನೆ. ಅದೇ ದ್ವಿತೀಯ ದೈವಗ್ರಂಥದೊಳಗೆ ಬರುವಷ್ಟರೊಳಗೆ ಅದರಲ್ಲಿ ಅದೇ ಮೂವರು ಪುರುಷರನ್ನು

ಅಲ್ಲಿ ಹೇಳಿದಂತೆ ಹೇಳದೆ **"ತಂದೆ, ಕುಮಾರನು, ಪರಿಶುದ್ಧಾತ್ಮ"**ಯೆಂದು ಹೆಸರುಗಳು ಬದಲಾಯಿಸಿ ಹೇಳಿದ್ದಾನೆ. ಆಗ ಭಗವದ್ಗೀತೆಯಲ್ಲಿ ಹೇಳಿದ ಮೂವರು ಪುರುಷರನ್ನೇ ಇಲ್ಲಿ ಹೇಳಿದ್ದಾರೆಂದು ಕ್ರೈಸ್ತರು ಯಾರೂ ಗ್ರಹಿಸಲಾರದೆ ಹೋಗಿದ್ದಾರೆ. ಹಾಗೆಯೇ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸ್ವಲ್ಪವಾದರೂ ಗುರುತಿಸದಂತೆ ಮೂವರನ್ನು ಕುರಿತು ಹೇಳುವುದಾಗಿದೆ. ಖುರಾನ್‌ನಲ್ಲಿ **"ನಡೆಸುವವನು, ನಡೆಸಲ್ಪಡುವವನು, ಸಾಕ್ಷಿಯಾಗಿ ನೋಡುವವನು"** ಎಂದು ಮೂವರನ್ನು ಹೇಳಿದರೂ ಪ್ರಥಮ ದೈವಗ್ರಂಥಕ್ಕೂ ನಂತರ ಹೇಳಿದ ಎರಡು ಗ್ರಂಥಗಳಿಗು ಎಷ್ಟೋ ವ್ಯತ್ಯಾಸ ಕಾಣಿಸುವುದರಿಂದ ಯಾರಿಗೂ ಇದು ಮೂವರು ಪುರುಷರ ವಿಷಯವೆಂದು ಭಗವದ್ಗೀತೆಯಲ್ಲಿನ ಜ್ಞಾನವೆಂದು ಜ್ಞಾಪಕ ಬಾರದಂತೆ ಹೋಗಿದೆ. ಇದನ್ನನುಸರಿಸಿ ದೇವರು ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವನ್ನು ಹೇಳಿದರೂ ಮನುಷ್ಯ ತಿಳಿಯದಂತಿದ್ದಾನೆಂದು ತಿಳಿಯುತ್ತಿದೆ.

**47) ಪ್ರ :– ಭೂಮಿ ಮೇಲೆ ಮೂರು ದೈವಗ್ರಂಥಗಳಿವೆಯೆಂದು ಹೇಳಿದ್ದೀರಲ್ಲವೆ! ಆ ಮೂರನ್ನು ಬೇರೆಬೇರೆ ವ್ಯಕ್ತಿಗಳು ಹೇಳಿದ್ದಾರೆ. ಮೂರು ಗ್ರಂಥಗಳೊಳಗಿನದ್ದು ಒಂದೇ ಜ್ಞಾನವಾದಾಗ ಮೂವರು ಏಕೆ ಹೇಳಿದ್ದಾರೆ?**

**ಉತ್ತರ :–** ಮೂರು ಗ್ರಂಥಗಳು ನಮಗೆ ಕಾಣಿಸಿದರೂ ಅವುಗಳನ್ನು ಹೇಳಿದವರು ಇಂತಹವರೆಂದು ತಿಳಿದರೂ, ನಿಜಕ್ಕೆ ಮೂರು ಗ್ರಂಥಗಳನ್ನು ಹೇಳಿದವರು ಯಾರೋ ಇಲ್ಲಿಯವರೆಗು ಬಹಳ ಜನರಿಗಾಗಲೀ, ಸ್ವಲ್ಪ ಜನರಿಗಾಗಲೀ, ಯಾರಿಗೇ ಆಗಲೀ ತಿಳಿದಿಲ್ಲ.

**48) ಪ್ರ :– ಅದೇನು! ಎಲ್ಲರಿಗೂ ತಿಳಿದಂತೆ ಕೃಷ್ಣನು ಭಗವದ್ಗೀತೆಯನ್ನು, ಯೇಸು ಬೈಬಲ್‌ನ್ನು, ಜಿಬ್ರಯೇಲ್ ಖುರಾನ್ ಗ್ರಂಥವನ್ನು ಹೇಳಿದ್ದಾನೆಂದು ತಿಳಿದಿದೆ. ಇನ್ನೂ ಹೇಳಿದರೇ ಕೃಷ್ಣನು ಅರ್ಜುನನಿಗೆ ಭಗವದ್ಗೀತೆಯನ್ನು, ಯೇಸು ಅವರ ಶಿಷ್ಯರಿಗೆ ಬೈಬಲ್‌ನ್ನು, ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಖುರಾನ್ ಗ್ರಂಥವನ್ನು ಹೇಳಿದಂತೆ ಎಲ್ಲರಿಗೂ ತಿಳಿದಿರುವಾಗ! ನೀವು ಯಾರಿಗೂ ತಿಳಿಯದೆಂದು ಹೇಳುವುದೇನು?**

**ಉತ್ತರ :–** ಆ ವಿಧವಾಗಿ ಎಲ್ಲರಿಗೂ ತಿಳಿದಿದೆಯೆಂದು ನನಗು ತಿಳಿದಿದೆ. ಆದ್ದರಿಂದಲೇ ನಿಜವಾಗಿ ಅವುಗಳನ್ನು ಹೇಳಿದವರು ಯಾರೋ ತಿಳಿಯದೆಂದು ಹೇಳಿದ್ದೇನೆ. ಖುರಾನ್ ಗ್ರಂಥವನ್ನು ಹೇಳಿರುವುದು ಜಿಬ್ರಯೇಲ್ ಎಂದು ಹೇಳಿದರೂ ಆತನನ್ನು 'ದೂತ' ಎನ್ನುತ್ತಿದ್ದಾರೆ. ಖುರಾನ್ ಗ್ರಂಥದಲ್ಲಿಯೇ ಜಿಬ್ರಯೇಲ್ ದೂತ ಅಲ್ಲ, ಆತನು **"ನಂಬುವಂತಹ ಒಂದು ಆತ್ಮ"** ಎಂದು ಸೂರಾ2, ಆಯತ್ 97ರಲ್ಲಿ ಮತ್ತು (26–193), (70–4), (78–38), (97–4) ರಲ್ಲಿ ಹೇಳಿದ್ದಾರೆ. ಜಿಬ್ರಯೇಲ್ ಆಕಾಶದಿಂದ ಇಳಿದು ಬಂದ ಒಂದು ಆತ್ಮಯೆಂದೂ, ಆತನು ಗ್ರಹವಾಗಿ ಖಗೋಳದಲ್ಲಿ ಇದ್ದಾನೆಂದೂ ಯಾರಿಗೂ ತಿಳಿದಿಲ್ಲ. ಆತನ ವಿಷಯ ಅದು ಆದಾಗ, ಭಗವದ್ಗೀತೆಯನ್ನು, ಬೈಬಲ್‌ನ್ನು ಹೇಳಿದವರು ಕೃಷ್ಣನು, ಕ್ರಿಸ್ತ ಇಬ್ಬರಾದರೂ ಅವರು ಇಬ್ಬರು ಅಲ್ಲವೆಂದು ಒಬ್ಬನೇ ಮನುಷ್ಯ ಇಬ್ಬರಾಗಿ ಮಾರುವೇಷದಲ್ಲಿ ಬಂದಿದ್ದಾನೆನ್ನುವ ವಿಷಯ ಕೂಡಾ ಯಾರಿಗೂ ತಿಳಿದಿಲ್ಲ. ಹಾಗೆ ಇಬ್ಬರಾಗಿ ಬಂದರೂ ಅಸಲು ವ್ಯಕ್ತಿ ಯಾರೆನ್ನುವ ವಿಷಯ ಇಲ್ಲಿಯವರೆಗು ಯಾರಿಗೂ ತಿಳಿಯದೆಂದೇ ಹೇಳಬಹುದು. ಖುರಾನ್ ಗ್ರಂಥವನ್ನು ಹೇಳಿರುವುದು ಜಿಬ್ರಯೇಲ್ ಎನ್ನುವ ಮಾತು ವಾಸ್ತವವೇ ಆದರೂ, ಜಿಬ್ರಯೇಲ್ ದೇವದೂತ ಅಲ್ಲ ಎನ್ನುವ ವಿಷಯ, ಆತನು ಖಗೋಳದಲ್ಲಿ ದೊಡ್ಡ ಕೆಲಸಗಳನ್ನು ನಿರ್ವಹಿಸುವ ದೇವರ ಪಾಲನೆಯಲ್ಲಿನ ಗ್ರಹವೆಂದು ಬಹಳ ಜನರಿಗೆ ತಿಳಿದಿಲ್ಲ.

**49) ಪ್ರ :– "ಭಗವದ್ಗೀತೆಯನ್ನು (ತೌರಾತ್‌ನ್ನು), ಬೈಬಲ್‌ನ್ನು (ಇಂಜೀಲ್‌ನ್ನು) ಹೇಳಿದವರು ಇಬ್ಬರು ಆದಾಗ ಒಬ್ಬರೇ ಹಾಗೆ ಮಾರುವೇಷದಲ್ಲಿ ಬಂದಿದ್ದಾನೆ" ಎಂದು ನೀವು ಅನ್ನುತ್ತಿದ್ದೀರ. ಆ ಒಬ್ಬರು ಯಾರು?**

**ಉತ್ತರ :–** ಆ ಒಬ್ಬರೇ **"ದೇವರು"**. ಆತನ ಜ್ಞಾನ ಆತನು ಹೊರತು ಇತರರು ಯಾರೂ ಹೇಳುವುದಕ್ಕೆ ಅವಕಾಶವಿಲ್ಲ. ಯಾವ ಮನುಷ್ಯನಿಗೂ ದೇವರ ವಿಷಯ ತಿಳಿಯದಿರುವಾಗ ಯಾರಾದರೂ ದೇವರ ವಿಷಯ (ಜ್ಞಾನ) ಹೇಳಿದ್ದಾನೆಂದರೇ ಅವನು ಮಾರು ವೇಷದಲ್ಲಿರುವ ದೇವರೇಯೆಂದು ತಿಳಿಯಬಹುದು. ಹಾಗೆ

ಮನುಷ್ಯನಾಗಿ ಬಂದು ಹೇಳುವಾಗ ಆತನು ದೇವರೇ ಆದರೂ ಆ ಸಮಯದಲ್ಲಿ ಆತನನ್ನು ದೇವರು ಎಂದು ಅನ್ನಬಾರದು. 'ದೇವರ ದೂತ' ಎಂದಾಗಲೀ, 'ಭಗವಂತನು' ಎಂದಾಗಲೀ ಹೇಳಬಹುದು. ಆತನು ಮಾರುವೇಷದಲ್ಲಿ ಭಗವಂತನಾಗಿ ಮನುಷ್ಯನ ಆಕಾರದಲ್ಲಿದ್ದರೂ, ಸಾಧಾರಣ ಸಾಮಾನ್ಯ ಮನುಷ್ಯನಾಗಿ ಕಾಣಿಸುತ್ತಿದ್ದರೂ ಆತನು ಮನುಷ್ಯನಲ್ಲ. ಅಸಲಾದ 'ದೇವರು' ಎಂದು ಗುರುತಿಟ್ಟುಕೊಳ್ಳಬೇಕು. ಜಿಬ್ರಯೇಲ್ ದೇವರ ಪಾಲನೆಯಲ್ಲಿನ ಒಂದು ಗ್ರಹ. ಆತನು ಖಗೋಳದಲ್ಲಿ ಸೂರ್ಯನಿಂದ ಜ್ಞಾನವನ್ನು ತಿಳಿದು ಅದನ್ನೇ ಪ್ರವಕ್ತರವರಿಗೆ ಹೇಳಿದ್ದಾನೆ. ಆತನು ಹೇಳಿರುವುದು ದೇವರ ಜ್ಞಾನವೇ ಆದ್ದರಿಂದ, ಭಗವದ್ಗೀತೆ, ಬೈಬಲ್, ಖುರಾನ್‌ನಲ್ಲಿನ ಜ್ಞಾನವೆಲ್ಲವೂ ಒಂದೇಯೆಂದು ಹೇಳಬಹುದು.

**50) ಪ್ರ :– ಮೂರು ಗ್ರಂಥಗಳಲ್ಲಿನ ಜ್ಞಾನ ಒಂದೇ ಆದಾಗ ಒಬ್ಬ ಹಿಂದೂ ಎಷ್ಟು ಜ್ಞಾನಿಯಾದರೇ ಒಬ್ಬ ಮುಸ್ಲಿಮ್ ಕೂಡಾ ಅಷ್ಟು ಜ್ಞಾನಿ ಆಗಬಲ್ಲನು ಅಲ್ಲವೆ! ಹಾಗೆಯೇ ಒಬ್ಬ ಮುಸ್ಲಿಮ್ ಎಷ್ಟು ಜ್ಞಾನಿಯಾದರೇ ಅಂತಹವನಾಗಿ ಕ್ರೈಸ್ತನು ಕೂಡಾ ಆಗಬಹುದಲ್ಲವೆ! ಮೂರರಲ್ಲಿ ಒಂದೇ ದೈವಜ್ಞಾನವಿರುವಾಗ ಮೂರು ಮತಗಳಲ್ಲಿ ಸಮಾನ ಜ್ಞಾನಿಗಳಿರಬಹುದಲ್ಲವೆ! ಮನುಷ್ಯರಲ್ಲಿ ಒಂದೇ ಜ್ಞಾನ ಏಕೆ ಇಲ್ಲದಂತೆ ಹೋಗಿದೆ? ಒಬ್ಬನು ಪೂರ್ವಕ್ಕೆ ಕೈಮುಗಿದರೇ ಮತ್ತೊಬ್ಬನು ಪಶ್ಚಿಮಕ್ಕೆ ಕೈ ಮುಗಿಯುತ್ತಿದ್ದಾನೆ. ಒಬ್ಬನು ಯೋಗ ಮಾಡಿದರೇ, ಮತ್ತೊಬ್ಬನು ಪ್ರಾರ್ಥನೆ ಮಾಡುತ್ತಿದ್ದಾನೆ. ಒಬ್ಬನು ದೇವರು ಎಂದರೇ ಮತ್ತೊಬ್ಬನು ಅಲ್ಲಾಹ್ ಎನ್ನುತ್ತಿದ್ದಾನೆ. ಈ ವ್ಯತ್ಯಾಸಗಳು ಏಕೆ ಬಂದಿವೆ?**

**ಉತ್ತರ :–** ಎಷ್ಟೊತ್ತು ಹೇಳಿದರೂ ಪ್ರಪಂಚವೆಲ್ಲದಕ್ಕೂ ದೇವರು ಒಬ್ಬನೇ! ದೇವರ ಜ್ಞಾನ ಒಂದೇ!! ಆದರೇ ದೇವರ ಜ್ಞಾನವನ್ನು ಮನುಷ್ಯ ಅರ್ಥ ಮಾಡಿಕೊಳ್ಳುವುದರಲ್ಲಿ ಎಷ್ಟೋ ವಿಧಗಳಾಗಿ ಸೀಳಿಹೋಗುತ್ತಿದ್ದಾನೆ. ಮನುಷ್ಯನಲ್ಲಿನ ಬುದ್ಧಿ, ಶ್ರದ್ಧೆಯನ್ನನುಸರಿಸಿ ಮನುಷ್ಯನಿಗೆ ದೇವರು, ದೇವರ ಜ್ಞಾನ ಅರ್ಥವಾಗುತ್ತಿರುತ್ತದೆ. ಆದ್ದರಿಂದ ಒಂದೇ ಭಗವದ್ಗೀತೆಯನ್ನು ಓದಿದವರಲ್ಲಿ

ಬೇರೆಬೇರೆ ಜ್ಞಾನಿಗಳಿದ್ದಾರೆ. ಒಂದೇ ಜ್ಞಾನವಿರುವ ಬೈಬಲ್, ಖುರಾನ್ ಓದಿದವರಲ್ಲಿ ಅವರಿಗೆ ಜ್ಞಾನ ಬೇರೆಯಾಗಿ ಅರ್ಥವಾಗುವುದರಿಂದ ಅವರಲ್ಲಿ ಒಬ್ಬನು ನೀತಿ, ನ್ಯಾಯ ಅವಶ್ಯಕವೆಂದರೇ ಮತ್ತೊಬ್ಬನು ಅವು ಎರಡು ಲೋಕ ಸಂಬಂಧವಾದವು, ಹಾಗೆ ಅಲ್ಲದೆ ದೈವಸಂಬಂಧ ಜ್ಞಾನ, ಧರ್ಮವನ್ನು ತಿಳಿಯಬೇಕು ಎಂದು ಅನ್ನುತ್ತಿದ್ದಾನೆ. ಈ ವಿಧವಾಗಿ ಗ್ರಹಿಸಿಕೊಳ್ಳುವುದರಿಂದ ಜ್ಞಾನ ಹೆಚ್ಚು ಕಡಿಮೆಯಾಗಿ ಅರ್ಥವಾಗುತ್ತಿದೆ. ನಮ್ಮ ಅವಗಾಹನೆ ಲೋಪದಲ್ಲಿನ ವ್ಯತ್ಯಾಸಗಳಿಂದ ಒಬ್ಬನು ಪೂರ್ವ ಎಂದು ಮತ್ತೊಬ್ಬನು ಪಶ್ಚಿಮ ಎಂದು ಅನ್ನುತ್ತಿದ್ದಾನೆ. ದೇವರು ಸರ್ವವ್ಯಾಪಿ ಆಗಿರುವುದರಿಂದ ಆತನಿಗೆ ಪೂರ್ವ ಎಷ್ಟೋ, ಪಶ್ಚಿಮ ಕೂಡಾ ಅಷ್ಟೇ ಇರುತ್ತದೆ. ದೇವರಿಗೆ ಎರಡೂ ಸಮಾನವೇ. ಎಲ್ಲ ವಿಷಯಗಳಲ್ಲಿಯೂ, ಎಲ್ಲ ಜ್ಞಾನಗಳಲ್ಲಿಯೂ ಮನುಷ್ಯ ದೇವರು ಹೇಳಿರುವುದನ್ನು ಗ್ರಹಿಸಿಕೊಳ್ಳುವುದರಲ್ಲಿ ಬಂದಿರುವ ಬದಲಾವಣೆಗಳಿಂದ ಒಬ್ಬನು ದೇವರು ಎಂದರೇ ಮತ್ತೊಬ್ಬನು ಅಲ್ಲಾಹ್ ಎನ್ನುತ್ತಿದ್ದಾನೆ. ಹೇಗೆಂದರೂ ದೇವರ ಲೆಕ್ಕದಲ್ಲಿ ಒಂದೇ. ಹೀಗೆ ಕೆಲವು ವಿಷಯಗಳಲ್ಲಿ ಮನುಷ್ಯ ತಪ್ಪಾಗಿ ಅರ್ಥೈಸಿಕೊಂಡಾಗ ಇನ್ನು ಕೆಲವು ವಿಷಯಗಳಲ್ಲಿ ದೇವರು ಹೇಳಿರುವುದಕ್ಕೆ ಪೂರ್ತಿ ವಿರುದ್ಧವಾಗಿ ಅರ್ಥವಾದ ವಿಷಯಗಳು ಸಹ ಇವೆ. ದೇವರಿಗೆ ಪೂರ್ತಿ ವಿರುದ್ಧವಾಗಿ ಇರುವ ಆಚರಣೆಗಳನ್ನು ಮಾಡುತ್ತಾ, ದೇವರಿಗೆ ಇಷ್ಟವಾದ ಕೆಲಸವನ್ನು ಮಾಡುತ್ತಿದ್ದೇನೆಂದು ತಪ್ಪಾಗಿ ಅರ್ಥೈಸಿಕೊಂಡ ವಿಷಯಗಳು ಬಹಳ ಇವೆ. ಉದಾಹರಣೆಗೆ ಭಗವದ್ಗೀತೆಯಲ್ಲಿ ಸ್ವತಃವಾಗಿ ದೇವರು ಹೇಳಿದ ಜ್ಞಾನದಲ್ಲಿ ಆಹಾರವನ್ನು ತಿನ್ನದಂತೆ ಉಪವಾಸ ಇರಬಾರದೆಂದು, ಹಾಗೆ ಆಹಾರ ತೆಗೆದುಕೊಳ್ಳದೇ ಹೋದರೇ ಅವನು ತೊಂದರೆ ಬೀಳುವುದಲ್ಲದೆ ಒಳಗಿರುವ ಆತ್ಮವನ್ನು ಕೂಡಾ ತೊಂದರೆಗೀಡುಮಾಡುತ್ತಾರೆಂದು, ಅದು ರಾಕ್ಷಸತ್ವ ವಾಗುತ್ತದೆಂದು ಶ್ರದ್ಧಾತ್ರಯ ವಿಭಾಗಯೋಗದಲ್ಲಿ ಆರನೆ ಶ್ಲೋಕದಲ್ಲಿ ಹೇಳಲಾಗಿದೆ. ಶರೀರ ಅವಯವಗಳನ್ನು ಕೃಶಿಸುವಂತೆ ಮಾಡುವುದಲ್ಲದೆ ಶರೀರದಲ್ಲಿರುವ ಅವರು, ಅವರಲ್ಲಿರುವ ನನ್ನನ್ನು ತೊಂದರೆಗೀಡು ಮಾಡುತ್ತಿದ್ದಾರೆಂದು, ಆತ್ಮ ಕಾರ್ಯಗಳಿಗೆ ಆತಂಕ ಉಂಟುಮಾಡುತ್ತಿದ್ದಾರೆಂದು, ಇದು ಒಳ್ಳೆಯದಲ್ಲವೆಂದು

ಅದನ್ನು ತಾಮಸ ಜ್ಞಾನವೆನ್ನುತ್ತಾರೆಂದು ದೇವರು ಹೇಳಿದ್ದಾನೆ. ದೇವರು ತನ್ನ ಮೊದಲ ಗ್ರಂಥದಲ್ಲಿ ಏನು ಹೇಳಿದ್ದಾನೋ ಅದಕ್ಕೆ ವಿರುದ್ಧವಾಗಿ ಉಳಿದ ಎರಡು ಗ್ರಂಥಗಳಲ್ಲಿ ಏನೂ ಹೇಳಲಿಲ್ಲ. ಉಳಿದ ಎರಡು ಗ್ರಂಥಗಳು ಮೊದಲ ಗ್ರಂಥದಲ್ಲಿನ ಜ್ಞಾನವನ್ನೇ ಧೃಢಪಡಿಸುತ್ತಿವೆ. ಮೊದಲ ಗ್ರಂಥವಾದ ಭಗವದ್ಗೀತೆ ಜ್ಞಾನವನ್ನೇ ಧೃಢಪಡಿಸುತ್ತಿದ್ದಂತೆ ಖುರಾನ್ ಗ್ರಂಥದಲ್ಲಿ ಬಹಳ ವಾಕ್ಯಗಳಲ್ಲಿ ಹೇಳಿದ್ದಾರೆ. ಈ ವಿಧವಾಗಿ ದೇವರು ಒಂದು ಗ್ರಂಥದಲ್ಲಿ ಹೇಳಿದ ಜ್ಞಾನಕ್ಕೆ ವಿರುದ್ಧವಾಗಿ ಬೇರೊಂದು ಗ್ರಂಥದಲ್ಲಿ ಎಲ್ಲೂ ಹೇಳಲಿಲ್ಲ. ಒಂದುವೇಳೆ ಎಲ್ಲಾದರೂ ವಿರುದ್ಧ ವಾಕ್ಯವಿದೆಯೆಂದರೇ ಅದು ದೇವರು ಹೇಳಿರುವುದಲ್ಲವೆಂದು, ಅದು ಮನುಷ್ಯರ ಸೃಷ್ಠಿಯೇ ಎಂದು ತಿಳಿಯಬೇಕು. ಆಗ ಮನುಷ್ಯರ ಕಲುಷಿತವನ್ನು ತೆಗೆದುಹಾಕಿ ಓದಿಕೊಳ್ಳಬೇಕು. ಇಲ್ಲದೇ ಹೋದರೇ ದೇವರ ಮಾರ್ಗವನ್ನು ಬಿಟ್ಟು ಪಕ್ಕಕ್ಕೆ ಹೋದಂತಾಗುತ್ತದೆ. ಆದ್ದರಿಂದ ಎಲ್ಲರೂ ಬಹಳ ಜಾಗ್ರತೆಯಾಗಿ ಜ್ಞಾನವನ್ನು ನೋಡಬೇಕಾಗಿದೆ. ಇರುವುದೆಲ್ಲಾ ಜ್ಞಾನವೆಂದು ಕೊಳ್ಳಬಾರದು.

ಭಗವದ್ಗೀತೆಯಲ್ಲಿ ಇದು ಒಳ್ಳೆಯ ಕೆಲಸ ಅಲ್ಲ ಎಂದು ದೇವರು ಹೇಳಿದರೇ, ಮತ್ತೊಂದು ಮತದವರು ದೇವರು ಮಾಡಬೇಡವೆಂದು ಗೀತೆಯಲ್ಲಿ ಹೇಳಿದ ಕೆಲಸವನ್ನೇ ಮಾಡುತ್ತಿದ್ದಾರೆ. ಅಲ್ಲಿ ಅವರ ಮತದಲ್ಲಿ ಮುಖ್ಯವಾದ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಎರಡು ಮತಗಳಿಗು, ಎರಡು ಮತಗಳು ಅನುಸರಿಸುತ್ತಿರುವ ಎರಡು ದೈವಗ್ರಂಥಗಳಿಗೆ ದೇವರು ಒಬ್ಬನೇ ದೊಡ್ಡವನಾದಾಗ, ಒಂದು ಮತದಲ್ಲಿ ಅಲ್ಲವೆಂದು, ಮತ್ತೊಂದು ಮತದಲ್ಲಿ ಹೌದೆಂದು ಹೇಳುವನಾ? ಎಂದು ಪ್ರಶ್ನೆ ಬಾರದೆ ಇರುವುದಿಲ್ಲ. ದೇವರು ಹಾಗೆ ಒಂದು ಕಡೆ ಒಂದು ವಿಧ, ಮತ್ತೊಂದುಕಡೆ ಮತ್ತೊಂದು ವಿಧವಾಗಿ ಎಂದಿಗೂ ಹೇಳಲಿಲ್ಲ. ಮನುಷ್ಯರು ದೇವರು ಹೇಳಿರುವುದನ್ನು ಅರ್ಥಮಾಡಿಕೊಳ್ಳಲಾರದೆ ತಪ್ಪುದಾರಿ ಹಿಡಿದು ಹೋಗಿದ್ದಾರೆ ಹೊರತು ಅದು ದೇವರು ಹೇಳಿದ ವಿಧಾನವಲ್ಲ. ದೇವರು ಪ್ರಥಮ ದೈವಗ್ರಂಥವಾದ ತನ್ನ ಭಗವದ್ಗೀತೆಯಲ್ಲಿ ಉಪವಾಸ ಮಾಡಬೇಡವೆಂದು, ಅಂತಹ ಆರಾಧನೆಯಿಂದ ಶರೀರದಲ್ಲಿನ ಆತ್ಮಕ್ಕೆ ತೊಂದರೆ ಇಟ್ಟು ಒಣಗಿಸಿದಂತಾ

ಗುವುದೆಂದು ಹೇಳಿ, ನಂತರ ತನ್ನ ಅಂತಿಮ ದೈವಗ್ರಂಥದಲ್ಲಿ ಉಪವಾಸವಿರು ಎಂದು ಹೇಳುವನಾ? ಹಾಗೆ ಎಲ್ಲೂ ಹೇಳಲಿಲ್ಲ. ಹೇಳದಿರುವುದನ್ನು ಹೇಳಿದಂತೆ ತಿಳಿದು ಅದನ್ನು ದೇವರ ಆರಾಧನೆಯಲ್ಲಿ ಭಾಗವೆಂದು ಹೇಳುವುದು ತಾಮಸವೆಂದು, ಮನುಷ್ಯ ಅಜ್ಞಾನವೆಂದು ಗೀತೆಯಲ್ಲಿಯೇ ಹೇಳಿದ್ದಾನೆ.

ಭಗವದ್ಗೀತೆಯಲ್ಲಿ ವೇದಗಳನ್ನು ಓದುವುದು, ದಾನಗಳು ಮಾಡುವುದು, ಯಜ್ಞಗಳು ಮಾಡುವುದು, ತಪಸ್ಸು (ಧ್ಯಾನ) ಮಾಡುವುದು ತನ್ನ ಆರಾಧನೆಯಲ್ಲಿನ ಭಾಗಗಳು ಅಲ್ಲವೆಂದು, ಅವುಗಳಿಂದ ನಾನು ತಿಳಿಯುವುದಿಲ್ಲವೆಂದು ಹೇಳಿದ ದೇವರು ಬೇರೊಂದು ಗ್ರಂಥದಲ್ಲಿ ಬೇರೊಂದು ವಿಧಾನವನ್ನು ತನ್ನ ಆರಾಧನೆಯೆಂದು ಹೇಳುವನಾ? **ತನ್ನ ಆರಾಧನೆಗಳು ಮೂರು ಯೋಗಗಳು ಮಾತ್ರವೇಯೆಂದು ಹೇಳಿದ್ದಾನೆ.** ಅವುಗಳನ್ನು ವಿನಹಾ ಬೇರೆ ಕ್ರಿಯೆಗಳಾವುವೂ ತನ್ನ ಆರಾಧನೆಗಳು ಅಲ್ಲವೆಂದು ತೀರ್ಮಾನಿಸಿ ಹೇಳುವುದಾಗಿದೆ. ಹಾಗಿರುವಾಗ ಬೇರೆಯದ್ದು ಎಲ್ಲಾದರೂ ತಿಳಿದಿದೆಯೆಂದರೇ ಅದು ಪ್ರಪಂಚ ಸಂಬಂಧ ವಾದುದಾದರೂ ಆಗಿರಬೇಕು ಅಥವಾ ನಾವು ಅರ್ಥ ಮಾಡಿಕೊಳ್ಳುವು ದರಲ್ಲಾದರೂ ತಪ್ಪಾಗಿ ಅರ್ಥೈಸಿಕೊಂಡಿರಬೇಕು. ಅಷ್ಟೇ ಹೊರತು ನಮ್ಮ ತಪ್ಪುಗಳನ್ನು ದೇವರ ಮೇಲೆ ಹಾಕಿ ದೇವರೇ ಹಾಗೆ ಹೇಳಿದ್ದಾನೆನ್ನುವುದು ಒಳ್ಳೆಯದಲ್ಲ. ಮನುಷ್ಯರಲ್ಲಿ ಇಂತಹ ಲೋಪಗಳಿವೆಯೆಂದು ಗ್ರಹಿಸಿದ ದೇವರು ಯಾರದು ಒಳ್ಳೆಯ ಜ್ಞಾನವೋ, ಯಾರದು ಶಾಸ್ತ್ರಬದ್ಧವಾದ ಜ್ಞಾನವೋ, ಯಾರದು ನಿಜವಾದ ಜ್ಞಾನವೋ, ಯಾರದು ಹೇತುಬದ್ಧವಾದ ಜ್ಞಾನವೋ, ಯಾರದು ದೇವರ ಜ್ಞಾನವೋ ತಿಳಿಯುವುದಕ್ಕೆ ಒಂದು ವಿಧಾನವನ್ನು ಏರ್ಪಡಿಸಿದ್ದಾನೆ. ಅದುವೇ ಸತ್ಯವನ್ನು ಆಧಾರ ಮಾಡಿಕೊಂಡು ನೋಡುವುದು, ಸತ್ಯ ಎಂದರೆ ಶಾಸ್ತ್ರ ಎಂದು ಅರ್ಥ. ಶಾಸ್ತ್ರ ಎಂದರೆ ನಡೆದುತೀರುವುದೆಂದು ಅರ್ಥ. ಸತ್ಯ ಎಂದರೆ ಪ್ರತ್ಯಕ್ಷವಾಗಿ ನಡೆಯುವುದೆಂದು ಅರ್ಥ. ಖಂಡಿತ ನಡೆಯುವುದೆಂದು ಅರ್ಥ. ನಡೆದುತೀರುವುದು ಶಾಸ್ತ್ರವಾಗುತ್ತದೆ, ಹಾಗೆಯೇ ಶಾಪವಾಗುತ್ತದೆ. ಶಾಪ ಎಂದರೆ ಸತ್ಯವಾಗಿ ನಡೆಯುವುದೆಂದು ಅರ್ಥ. ಆದ್ದರಿಂದ ಶಾಸ್ತ್ರವನ್ನು ಆಧಾರ ಮಾಡಿಕೊಂಡು ನಿನಗೆ ತಿಳಿದ ಜ್ಞಾನ ಸರಿಯಾದುದೋ

ಅಲ್ಲವೋ ತೀರ್ಮಾನಿಸಿ ನೋಡಿಕೋಯೆಂದು ಹೇಳಿದ್ದಾನೆ. ಅದೇ ವಿಷಯವನ್ನು ನೆನಪು ಮಾಡುತ್ತಾ ಭಗವದ್ಗೀತೆ ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 23ನೇ ಶ್ಲೋಕದಲ್ಲಿ **"ಯಾರಾದರೇ ಶಾಸ್ತ್ರ ವಿಧಾನವನ್ನು ಬಿಟ್ಟು ಅವನಿಗಿಷ್ಟಬಂದಿರುವುದನ್ನು ಜ್ಞಾನವೆಂದುಕೊಂಡು ಅದನ್ನು ಅನುಸರಿಸಿದರೇ ಅಂತಹವನಿಗೆ ಮೋಕ್ಷ ಲಭಿಸುವುದಿಲ್ಲ. ಅವನಿಗೆ ದೇವರ ಜ್ಞಾನ ಯಾವುದೋ ಸತ್ಯವಾಗಿ ತಿಳಿಯದೆ ಹೋಗುವುದರಿಂದ ಅವನು ಎಂದಿಗೂ ಪರಮ ಪದವನ್ನು ಹೊಂದಲಾರನು"** ಎಂದು ಹೇಳುತ್ತಾ ಪಕ್ಕದಲ್ಲೇ ಇರುವ 24ನೇ ಶ್ಲೋಕದಲ್ಲಿ ಈ ವಿಧವಾಗಿ ತಿಳಿಸುತ್ತಿದ್ದಾನೆ ನೋಡಿರಿ.

**23ನೇ ಶ್ಲೋ॥ ಯಃ ಶಾಸ್ತ್ರ ವಿಧಿ ಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿ ಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥**

**ಭಾವಾರ್ಥ :–** "ದೈವಮಾರ್ಗದಲ್ಲಿ ಶಾಸ್ತ್ರವನ್ನು ಅನುಸರಿಸದೆ ಇಷ್ಟ ಬಂದಂತೆ ನಡೆದುಕೊಳ್ಳುವವನು ಜ್ಞಾನಿ ಆಗಲಾರನು, ಸಿದ್ಧಿಹೊಂದಲಾರನು. ಅದರಿಂದ ಅವನಿಗೆ ಎಂತಹ ಸುಖ ದಕ್ಕುವುದಿಲ್ಲ, ಪರಮ ಪದವನ್ನು ಹೊಂದಲಾರನು"

**24ನೇ ಶ್ಲೋ॥ ತಸ್ಮಾ ಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯ ವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮಕರ್ತು ಮಿಹಾರ್ಹಸಿ ॥**

**ಭಾವಾರ್ಥ :–** "ದೈವ ಮಾರ್ಗದಲ್ಲಿ ಯಾವುವು ಮಾಡಬೇಕಾದ ಕೆಲಸಗಳೋ, ಯಾವುವು ಮಾಡಬಾರದ ಕೆಲಸಗಳೋ ಶಾಸ್ತ್ರವೇ ತೀರ್ಮಾನಿಸಿ ಹೇಳುತ್ತದೆ. ಅದಕ್ಕೆ ಶಾಸ್ತ್ರವೇ ಪ್ರಮಾಣವಾಗಿ ಇದೆ. ಆದ್ದರಿಂದ ಶಾಸ್ತ್ರ ವಿಧಾನ ತಿಳಿದು ಯಾವಾಗಲೂ ಶಾಸ್ತ್ರ ಹೇಳಿದಂತೇ ಮಾಡು"

ಈ ಎರಡು ಶ್ಲೋಕಗಳಲ್ಲಿ ದೇವರ ಮಾರ್ಗವನ್ನು ಅನುಸರಿಸುವವರು ಏನು ಮಾಡಬಾರದೋ ಏನು ಮಾಡಬೇಕೋ ಶಾಸ್ತ್ರವೇ ಹೇಳುತ್ತದೆ. ಅದರ ಪ್ರಕಾರ ನಡೆಯಿರೆಂದು ಹೇಳಿದ್ದಾನೆ. ಹಾಗೆ ನಡೆಯದವನು ಜ್ಞಾನಿಆಗಲಾರನೆಂದು, ಮೋಕ್ಷ ಹೊಂದಲಾರನೆಂದು ಕೂಡಾ ಹೇಳುವುದು ನಡೆದಿದೆ.

**51) ಪ್ರ :– ಶಾಸ್ತ್ರವೆಂದರೇ ಯಾವುದು? ಶಾಸ್ತ್ರ ಹೇಗೆ ಸತ್ಯಬದ್ಧವಾಗಿ ಇದೆ? ನಮಗೆ ಅರ್ಥವಾಗುವುದಕ್ಕೆ ವಿವರವಾಗಿ ಹೇಳಿರಿ?**

**ಉತ್ತರ :–** ದೇವರು ಹೇಳಿದ ಪ್ರತಿ ಮಾತು ಶಾಸ್ತ್ರವೇಯಾಗುತ್ತದೆ. ದೇವರು ಹೇಳದಿರುವುದು ಅಶಾಸ್ತ್ರವಾಗುತ್ತದೆ. ದೇವರು ಹೇಳಿದ ಶಾಸ್ತ್ರಕ್ಕೆ ಬ್ರಹ್ಮವಿದ್ಯಾ ಶಾಸ್ತ್ರ ಎಂದು ಹೆಸರಿದೆ. ಭಗವದ್ಗೀತೆ ಗ್ರಂಥವಿದೆ. ಅದರಲ್ಲಿ ಬ್ರಹ್ಮವಿದ್ಯಾ ಶಾಸ್ತ್ರ ಇದೆ. ಲೋಕದಲ್ಲಿ ಶಾಸ್ತ್ರಗಳು ಆರು ಇರುವಾಗ, ಅದರಲ್ಲಿ ಪ್ರಪಂಚಕ್ಕೆ ಸಂಬಂಧಿಸಿರುವವು ಐದು ಶಾಸ್ತ್ರಗಳು ಆದಾಗ ಒಂದು ಮಾತ್ರ ದೇವರಿಗೆ ಸಂಬಂಧಿಸಿದ ಬ್ರಹ್ಮವಿದ್ಯಾಶಾಸ್ತ್ರ. ಪ್ರಪಂಚ ವಿಷಯಗಳಿಗೆ ಶಾಸ್ತ್ರಗಳಿದ್ದರೂ ಪ್ರಪಂಚ ಕೆಲಸಗಳೆಲ್ಲವೂ ಕರ್ಮಾಧೀನದಲ್ಲಿ ಇದ್ದು ಕರ್ಮ ಪ್ರಕಾರ ನಡೆಯುತ್ತಿರುತ್ತವೆ. ಒಂದು ದೈವಮಾರ್ಗದಲ್ಲಿ ದೈವ ಕಾರ್ಯಗಳಿಗೆ ಕರ್ಮ ಇರುವುದಿಲ್ಲ. **ದೈವ ಕಾರ್ಯಗಳು ಕರ್ಮಾತೀತವಾದವು. ಆದ್ದರಿಂದ ದೈವಕಾರ್ಯಗಳೆಲ್ಲವೂ ಮನುಷ್ಯ ಸ್ವಯಂ ನಿರ್ಣಯದ ಮೇಲೆ ಆಧಾರಪಟ್ಟಿರುತ್ತವೆ.** ಮನುಷ್ಯ ಸ್ವಯಂ ನಿರ್ಣಯ ಸಮಯದಲ್ಲಿ ಅಜ್ಞಾನ ನಿರ್ಣಯಗಳು, ದೇವರಿಗೆ ವಿರುದ್ಧ ನಿರ್ಣಯಗಳು ಮಾಡುವ ಅವಕಾಶವಿದೆ. ಹಾಗೆ ದೇವರಿಗೆ ಸರಿಹೋಗದ ಕೆಲಸಗಳನ್ನು ಮಾಡದಂತಿರುವುದಕ್ಕೆ ಯಾವುವು ಮಾಡಬೇಕಾಗಿರುವವೋ, ಯಾವುವು ಮಾಡಬಾರದವೋ ಬ್ರಹ್ಮವಿದ್ಯಾ ಶಾಸ್ತ್ರ ತೀರ್ಮಾನಿಸಿ ಹೇಳುತ್ತದೆ. ಆದ್ದರಿಂದ ಶಾಸ್ತ್ರವನ್ನನುಸರಿಸಿ ದೇವರ ಕೆಲಸಗಳು ಮಾಡಬೇಕಾಗಿದೆ. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಒಂದು ವಿಷಯವನ್ನು ಹೇಳಿದರೇ ಅದು ಶಾಸನವಾಗಿ ಇರುತ್ತದೆ. ಅಂತಹ ವಿಷಯವನ್ನು ಒಂದನ್ನು ತೆಗೆದುಕೊಂಡು ನೋಡಿದರೇ ಭಗವದ್ಗೀತೆ ಯಲ್ಲಿ ಸಾಂಖ್ಯಯೋಗದಲ್ಲಿ 27ನೇ ಶ್ಲೋಕದಲ್ಲಿ ಹೀಗೆ ಇದೆ ನೋಡಿರಿ.

ಸಾಂಖ್ಯ ಯೋಗ 27ನೇ ಶ್ಲೋಕ **"ಜಾತಸ್ಯ ಹಿ ಧೃವೋಮೃತ್ಯು ರ್ಧ್ರುವಂ ಜನ್ಮ ಮೃತಸ್ಯ ಚ"** ಎಂದು ಇದೆ. ಅದರ ಭಾವನೆಯ ಪ್ರಕಾರ **"ಹುಟ್ಟಿದವನು ಮರಣಿಸುವುದು ತಪ್ಪುವುದಿಲ್ಲ. ಮರಣಿಸಿದವನು ಪುನಃ ಹುಟ್ಟುವುದು ತಪ್ಪುವುದಿಲ್ಲ, ಅನಿವಾರ್ಯವಾದ ಈ ಕಾರ್ಯ ಎಂದಿಗೂ ನಿಲ್ಲುವುದಿಲ್ಲ"** ಎಂದು ಇದೆ.

ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನ ದೇವರ ವಾಕ್ಯ ಸತ್ಯವಾಗಿರುತ್ತದೆ. ಏಕೆಂದರೆ ಅದು ಶಾಸನಗಳೊಂದಿಗೆ ಕೂಡಿಕೊಂಡ ಶಾಸ್ತ್ರವಚನ. ಆದರೇ ಮನುಷ್ಯರು ಮರಣಿಸುವುದು ನಾವು ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ. ಹಾಗೆಯೇ ಮನುಷ್ಯರು ಹುಟ್ಟುತ್ತಿರುವುದು ನೋಡುತ್ತಿದ್ದೇವೆ. ಆದರೇ ವಾಕ್ಯದ ಪ್ರಕಾರ ಮರಣಿಸಿದವನೇ ಪುನಃ ಹುಟ್ಟುತ್ತಿದ್ದಾನೆನ್ನುವ ವಿಷಯ ನಮಗೆ ತಿಳಿದಿಲ್ಲ. ಹುಟ್ಟುವವರೆಲ್ಲರೂ ಹಿಂದಿನ ಜನ್ಮದ ಜ್ಞಾಪಕವನ್ನು ಕಳೆದುಕೊಂಡು ಹುಟ್ಟುತ್ತಿದ್ದಾರೆ, ಆದ್ದರಿಂದ ಸಾಯುವವನ ವಿಷಯ ತಿಳಿದರೂ, ಹುಟ್ಟುವವನು ಯಾರು ಎನ್ನುವ ವಿಷಯ ತಿಳಿದಿಲ್ಲ. ಹಾಗಿರುವಾಗ ದೇವರ ಮಾತಿನೊಳಗಿನ ಸತ್ಯ ತಿಳಿಯದಂತೆ ಹೋಗಬಲ್ಲದು. ಹಾಗಲ್ಲದೆ ದೇವರು ಎಲ್ಲಾದರೂ ಒಂದು ಕಡೆ ಯಾವಾಗಾದರೂ ಒಬ್ಬನಿಗೆ ಹಿಂದಿನ ಜನ್ಮ ಜ್ಞಾಪಕ ಬರುವಂತೆ ಮಾಡುತ್ತಿದ್ದಾನೆ. ಹಾಗೆ ಜ್ಞಾಪಕ ಬಂದವನು ತಾನು ಹಿಂದಿನ ಜನ್ಮದಲ್ಲಿ ಎಲ್ಲಿ ಮರಣಿಸಿರುವುದು, ಯಾವಾಗ ಮರಣಿಸಿರುವುದು, ಹೇಗೆ ಮರಣಿಸಿರುವುದು ಹೇಳುತ್ತಿದ್ದಾನೆ. ಹಿಂದಿನ ಜನ್ಮದಲ್ಲಿರುವ ಅಣ್ಣತಮ್ಮಂದಿರನ್ನು, ಅಕ್ಕ ತಂಗಿಯರನ್ನು ಹೇಳುವುದೇ ಅಲ್ಲದೆ ಅಲ್ಲಿಗೆ ಹೋಗಿ ಗುರುತು ಹಿಡಿದು ಮಾತನಾಡಿಸುತ್ತಿದ್ದಾನೆ. ಇದೆಲ್ಲಾ ದೇವರ ಮಾತಿಗೆ ಪ್ರತ್ಯಕ್ಷ ಪ್ರಮಾಣವಾಗಿ ನಡೆದಂತೆ ತಿಳಿಯುತ್ತಿದೆ. ಆಗ ದೇವರ ಮಾತು ಸತ್ಯಬದ್ಧವೆಂದು, ಶಾಸ್ತ್ರವೆಂದು ತಿಳಿದುಹೋಗುತ್ತಿದೆ. ಪ್ರತ್ಯಕ್ಷವಾಗಿ ನಡೆದ ಕೆಲವು ಸಂಘಟನೆಗಳನ್ನು ಇಲ್ಲಿ ನೋಡೋಣ.

ಈಗ ಮೊದಲ ವಿಧಾನದಲ್ಲಿ ಆತ್ಮ ಗತಜನ್ಮಗಳನ್ನು ತಿಳಿಸಿದ ಯಥಾರ್ಥ ಸಂಘಟನೆಗಳನ್ನು ವಿವರಿಸಿಕೊಳ್ಳೋಣ. 1930ನೇ ವರ್ಷ ಜೂನ್ ಅಥವಾ ಜೂಲೈ ತಿಂಗಳಲ್ಲಿ ಲೆಬನಾನ್ ದೇಶದಲ್ಲಿ "ಹಾಸನ್" ಎನ್ನುವ ಹೆಸರಿರುವ ಸ್ತ್ರೀ ಜನ್ಮಿಸಿದಳು. ಪುನರ್ಜನ್ಮಗಳು ಇಲ್ಲ ಎಂದು ಹೇಳುತ್ತಿರುವ ಇಸ್ಲಾಮ್ ಮತದಲ್ಲಿ ಹಾಸನ್ ಜನ್ಮಿಸಿರುವುದು ವಿಶೇಷ. ಆಕೆಗೆ 20 ವರ್ಷಗಳ ಯುಕ್ತವಯಸ್ಸಿನಲ್ಲಿ "ಫರೂಕ್" ಎನ್ನುವ ವ್ಯಕ್ತಿಯೊಂದಿಗೆ ವಿವಾಹ ನಡೆದಿದೆ. ಫರೂಕ್, ಹಾಸನ್ ಜೋಡಿಗೆ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದ್ದಾರೆ. ಹಾಸನ್‌ಗೆ

“ನಭೀ” ಎನ್ನುವ ಸಹೋದರನು ಸಹ ಇರುತ್ತಿದ್ದನು. ಆತನು ಲೆಬನಾನ್ ದೇಶದಲ್ಲಿ ಲೆಬನಾನ್ ಸಮಾಜದಲ್ಲಿ ಬಹಳ ಹೆಸರು ಹೊಂದಿದವನು. ಆದರೆ ನಭಿ ಯುಕ್ತವಯಸ್ಸಿನಲ್ಲಿ ವಿಮಾನ ಅಪಘಾತದಲ್ಲಿ ಮರಣಿಸಿದ್ದಾನೆ. ಹಾಸನ್ ತನ್ನ ಎರಡನೆ ಮಗಳಿಗೆ ಜನ್ಮಕೊಡುವಾಗ ಅನಾರೋಗ್ಯಪಾಲಾಗಿ ಗುಂಡಿಗೆ ಸಮಸ್ಯೆ ಬಂದಿದೆ. ಅದರಿಂದ ಇನ್ನು ಮೇಲೆ ಮಕ್ಕಳನ್ನು ಹೆರಬಾರದೆಂದು ಡಾಕ್ಟರುಗಳು ಸಲಹೆ ಕೊಟ್ಟಿದ್ದಾರೆ. ಆದರೆ ಹಾಸನ್ ಆ ಸಲಹೆಯನ್ನು ತೆಗೆದುಕೊಳ್ಳದೆ 1962ರಲ್ಲಿ ಮೂರನೆ ಗಂಡು ಮಗುವಿಗೆ ಜನ್ಮಕೊಟ್ಟಿದ್ದಾಳೆ. 1963ರಲ್ಲಿ ತನ್ನ ತಮ್ಮನು ನಭೀ ಸತ್ತುಹೋಗುವುದರಿಂದ ಆಕೆ ಆರೋಗ್ಯ ಮತ್ತೆ ಕ್ಷೀಣಿಸತೊಡಗಿತು. ಆಗ ಆಕೆ ತಾನು ಸಾಯುವುದು ಖಾಯಮೆಂದು ಕೊಂಡಿದ್ದಾಳೆ. ಸ್ವಲ್ಪಕಾಲಕ್ಕೆ 36 ಸಂವತ್ಸರಗಳ ವಯಸ್ಸಿರುವ ಹಾಸನ್ ವರ್ಜಿನಿಯಾದಲ್ಲಿ ಇರುವ “ರಿಚ್‌ಮಡ್” ಎಂಬ ಡಾಕ್ಟರ್ ಹತ್ತಿರಕ್ಕೆ ಗುಂಡಿಗೆ ಆಪರೇಷನ್ ಗೋಸ್ಕರ ಹೋಗಿದ್ದಾಳೆ. ಆಪರೇಷನ್‌ಗೆ ಮೊದಲು ತನ್ನ ದೊಡ್ಡ ಮಗಳು ಲೈಲಾಗೆ ಫೋನ್ ಮಾಡಬೇಕೆಂದುಕೊಂಡಿದ್ದಾಳೆ, ಆದರೆ ಮಾಡಲು ಆಗಲಿಲ್ಲ. ಆಪರೇಷನ್ ನಂತರ ಒಂದುದಿನ ಮಾತ್ರ ಬದುಕಿ ಬಹಳ ಕ್ಲಿಷ್ಟ ಪರಿಸ್ಥಿತಿಯಲ್ಲಿ ಹಾಸನ್ ಮರಣಿಸಿದ್ದಾಳೆ.

ಹಾಸನ್ ಮರಣಿಸಿದ ಹತ್ತು ದಿನಗಳಿಗೆ ಸುಜನ್ನೇಗಾನೆಮ್ ಎನ್ನುವ ಮಗು ಒಂದು ಕುಟುಂಬದಲ್ಲಿ ಹುಟ್ಟಿದೆ. ಸುಜನ್ನೆಗಾನೆಮ್ 16 ತಿಂಗಳ ವಯಸ್ಸಿರುವ ಚಿಕ್ಕ ಮಗುವಾಗಿ ಇದ್ದು ಮಾತುಗಳು ಬಂದು ಬಾರದ ಸಮಯದಲ್ಲಿ ಫೋನ್ ತೆಗೆದುಕೊಂಡು ಹಲೋ ಲೈಲಾ ಎಂದು ಪದೇಪದೇ ಅನ್ನುತ್ತಾ ಇರುತ್ತಿದ್ದಳು. ಆ ಕುಟುಂಬದವರಿಗಾಗಲಿ, ಸುಜನ್ನೆ ತಾಯಿಗಾಗಲಿ ಲೈಲಾ ಯಾರೋ? ಅಷ್ಟು ಚಿಕ್ಕ ಮಗು ಹಾಗೆ ಏಕೆ ಫೋನ್‌ನಲ್ಲಿ ಕರೆಯುತ್ತಿದ್ದಾಳೋ ಅರ್ಥವಾಗಲಿಲ್ಲ. ನಂತರ ಆರು ತಿಂಗಳುಗಳು ಕಳೆದ ಸುಜನ್ನೆಗೆ ಎರಡು ಸಂವತ್ಸರಗಳ ವಯಸ್ಸು ಪೂರ್ತಿ ಆಗಿದೆ. ಆಗ ಮಾತುಗಳು ಸಹ ಚೆನ್ನಾಗಿ ಬಂದಿವೆ. ಆಗ ಆಕೆಯ ತಾಯಿ ಲೈಲಾ ಯಾರು? ಎಂದು ಕೇಳಿದಳು. ಅದಕ್ಕೆ ಸುಜನ್ನೆಗಾನೆಮ್ ನನಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆಂದು, ಅವರಲ್ಲಿ ಒಬ್ಬ

ಮಗಳ ಹೆಸರು ಲೈಲಾ ಎಂದು ಹೇಳಿದಳು. ಅಷ್ಟೇ ಅಲ್ಲದೆ ತನ್ನ ಹೆಸರು ಸುಜನ್ನೆ ಅಲ್ಲವೆಂದು, ತನ್ನ ಹೆಸರು ಹಾಸನ್ ಎಂದು, ತನ್ನ ಗಂಡನ ಹೆಸರು ಫರೂಕ್ ಎಂದು, ತನ್ನ ತಾಯಿತಂದೆಯರ ಹೆಸರುಗಳು, ತಮ್ಮಂದಿರ ಹೆಸರುಗಳು, ಉಳಿದ ಕುಟುಂಬ ಸದಸ್ಯರ ಹೆಸರುಗಳು ಒಟ್ಟು 13 ಹೆಸರುಗಳು ಕ್ರಮವಾಗಿ ಹೇಳಿದಳು. ಇನ್ನೂ ತನ್ನ ಊರಿನ ವಿವರಗಳು ಕೇಳಿದರೆ ಈಗ ನನ್ನ ತಲೆ ಚಿಕ್ಕದು ಇನ್ನು ಸ್ವಲ್ಪ ಕಾಲಕ್ಕೆ ಎಲ್ಲ ವಿಷಯಗಳು ಹೇಳುತ್ತೇನೆಂದು ಹೇಳಿದ್ದಾಳೆ.

ಈ ವಿಧವಾಗಿ ಸುಜನ್ನೆ ಹೇಳಿದ ಮಾತುಗಳನ್ನು ಕೇಳಿ ಆಕೆಯ ಕುಟುಂಬದಲ್ಲಿರುವವರು ಸುಜನ್ನೆ ಹಿಂದಿನ ಜನ್ಮದಲ್ಲಿ ಹಾಸನ್ ಆಗಿ ಎಲ್ಲಿ ಹುಟ್ಟಿದ್ದಳೊ ತಿಳಿದುಕೊಳ್ಳಬೇಕೆಂದುಕೊಂಡರು. ಆ ವಾರ್ತೆಯನ್ನು ಪತ್ರಿಕೆ ಮೂಲಕ ಹೊರಗಡೆ ತಿಳಿಸಿದರು. ಆಗ ಹಾಸನ್ ಕುಟುಂಬದವರು, ಹಾಸನ್ ಗಂಡ ಫರೂಕ್ ಸುಜನ್ನೆಯನ್ನು ನೋಡುವುದಕ್ಕೆ ಬಂದಿದ್ದಾರೆ. ಮೊದಲು ಫರೂಕ್ ಕುಟುಂಬದವರು ಚಿಕ್ಕಮಗುವಾಗಿರುವ ಸುಜನ್ನೆ ಹೇಳುವ ಮಾತುಗಳನ್ನು ನಂಬದೆ ಹೋಗಿದ್ದಾರೆ. ಹಾಸನ್ ಬಂಧುಗಳನ್ನು ಸರಿಯಾಗಿ ಅವರ ಹೆಸರುಗಳಿಂದ ಸುಜನ್ನೆ ಕರೆಯುವುದರಿಂದ ಫರೂಕ್ ಕುಟುಂಬದವರು ಆ ಹುಡುಗಿಯನ್ನು ನಂಬುತ್ತಾರೆ. ಹಾಸನ್ ತನ್ನ ಒಡವೆಗಳನ್ನು, ಇತರೆ ಆಭರಣಗಳನ್ನು ವರ್ಜೀನಿಯಾದಲ್ಲಿನ ತನ್ನ ತಮ್ಮ ಹೆರ್‌ಕುಲೇಗೆ ಕೊಟ್ಟಿದ್ದಾಳೆ. ಇದು ಸರ್ಜರಿಗೆ ಮೊದಲು ನಡೆದ ಕಥೆ. ಆ ಒಡವೆಗಳನ್ನು ಹೆರ್‌ಕುಲೇಗೆ ಕೊಡುತ್ತಾ, ಇವುಗಳನ್ನು ತನ್ನ ಮಕ್ಕಳಿಗೆ ಕೊಡಬೇಕೆಂದು ಹೇಳಿದಳು. ಈ ವಿಷಯ ಹಾಸನ್‌ಗು ಅವರ ಕುಟುಂಬದವರಿಗು ಅಲ್ಲದೆ ಇನ್ಯಾರಿಗು ತಿಳಿದಿಲ್ಲ. ಇವೆಲ್ಲವನ್ನು ಕೇಳಿದ ನಂತರ ಸುಜನ್ನೇ ಗತಜನ್ಮದಲ್ಲಿ ಹಾಸನ್ ಆಗಿ ಇದ್ದಳೆಂದು ದೃಢೀಕರಿಸಲಾಗಿದೆ.

ಓದುವುದಕ್ಕಾಗಲಿ, ಬರೆಯುವುದಕ್ಕಾಗಲಿ ಬಾರದ ಮುನ್ನವೇ ಸುಜನ್ನೆ ಪೇಪರ್ ಮೇಲೆ ಯಾವೋ ನಂಬರ್‌ಗಳು ಬರೆಯುತ್ತಿದ್ದಳು. ನಂತರ ಆ ನಂಬರ್‌ಗಳು ಫರೂಕ್ ಮನೆಯ ಫೋನ್ ನಂಬರ್‌ಗಳೆಂದು ತಿಳಿದಿದೆ. ಸುಜನ್ನೆಗೆ

ಐದು ಸಂವತ್ಸರಗಳ ವಯಸ್ಸಿರುವಾಗಲೆ ದಿನಕ್ಕೆ ಮೂರು ಸಲ ಫರೂಕ್‌ಗೆ ಫೋನ್ ಮಾಡುತ್ತಿದ್ದಳು. ಫರೂಕ್‌ನನ್ನು ಬೇಟಿಯಾದಾಗ ಸುಜನ್ನೆ ಆತನ ಮಡಿಲಲ್ಲಿ ಕುಳಿತುಕೊಂಡು ನಿದ್ರಿಸುತ್ತಿದ್ದಳು. ಪೋಲೀಸ್ ಉದ್ಯೋಗ ಮಾಡುವ ಫರೂಕ್, ಮರಣಿಸಿದ ತನ್ನ ಹೆಂಡತಿ ಹಾಸನ್ ಸುಜನ್ನೆಯಾಗಿ ಜನ್ಮಿಸಿದ್ದಾಳೆಂದು ಅಂಗೀಕರಿಸಿದನು. ಸುಜನ್ನೆಗೆ ಯಾವುದಾದರು ಫೋಟೊಗಳು ತೋರಿಸಿದರೆ ಅವುಗಳಲ್ಲಿನ ವ್ಯಕ್ತಿಗಳನ್ನು ಗುರುತಿಸುವುದೆ ಅಲ್ಲದೆ, ಹಾಸನ್‌ಗೆ ಆ ಪೋಟೋ ದಲ್ಲಿರುವವರ ಸಂಬಂಧವನ್ನು ಸುಜನ್ನೆ ವಿವರಿಸುತ್ತಿದ್ದಳು. ಕೆಲವು ಹಾಸನ್‌ಗೆ ಅಲ್ಲದೆ ಯಾರಿಗು ತಿಳಿಯದ ವಿವರಗಳನ್ನು ಸುಜನ್ನೆ ವಿವರಿಸುತ್ತಿದ್ದಳು. ಇದರಿಂದ ಹೋದ ಜನ್ಮದಲ್ಲಿನ ಹಾಸನ್ ಈ ಜನ್ಮದಲ್ಲಿ ಸುಜನ್ನೆಯಾಗಿ ಹುಟ್ಟಿರುವುದೆಂದು ಪೂರ್ತಿ ನಿರೂಪಣೆಗೆ ಬಂದಿದೆ. ಈ ವಿಷಯದಿಂದ ಪುನರ್ಜನ್ಮ ಇದೆಯೆಂದು ನಿರೂಪಣೆಗೆ ಬಂದಿದೆ. 40 ಸಂವತ್ಸರಗಳ ಕೆಳಗೆ ನಡೆದ ಈ ಸಂಘಟನೆಯನ್ನು ಯಾರೂ ಅಲ್ಲಗಳೆಯುವುದಿಲ್ಲ ಮತ್ತು ಖಂಡಿಸುವುದೂ ಇಲ್ಲ.

ನಾವು ಇಷ್ಟೆಲ್ಲಾ ಪುನರ್ಜನ್ಮಗಳಿವೆಯೆಂದು ಹೇಳಿದರೂ ನಂಬದವರು ಇರಬಹುದು. ಅದಕ್ಕೆಂದು ಮುಸ್ಲಿಮ್ ಕುಟುಂಬದಲ್ಲಿ ಸತ್ತುಹೋಗಿ ಪುನಃ ಮುಸ್ಲಿಮ್ ಕುಟುಂಬದಲ್ಲಿಯೆ ಹುಟ್ಟಿದ ಒಬ್ಬ ವ್ಯಕ್ತಿಯ ವಾಸ್ತವ ಸಂಘಟನೆಯನ್ನು ನೋಡೋಣ. ಇದಕ್ಕಿಂತ ಮೊದಲು ಹೇಳಿರುವುದು ಒಬ್ಬ ಮುಸ್ಲಿಮ್ ಸ್ತ್ರೀ ಆದ ಹಾಸನ್‌ಳ ಪುನರ್ಜನ್ಮ. ಈಗ ಒಬ್ಬ ಮುಸ್ಲಿಮ್ ಆದ ಪುರುಷನ ಜನ್ಮವನ್ನು ಕುರಿತು ಹೇಳುತ್ತಿದ್ದೇವೆ. ಇದು ಸಹ ಲೆಬನಾನ್ ದೇಶದಲ್ಲಿ ನಡೆದಿರುವುದೆ.

1943ರಲ್ಲಿ ಲೆಬನಾನ್ ದೇಶದಲ್ಲಿ "ಫರ್‌ಮಟ್‌ಟ" ಎಂಬ ನಗರದಲ್ಲಿ ರಷೀದ್ ಖಾದಿಜ್ ಎಂಬ ವ್ಯಕ್ತಿ ಜನ್ಮಿಸಿದ್ದಾನೆ. ಆತನು ಆಟೋಮೊಬೈಲ್ ಮೆಕಾನಿಕ್ ಆಗಿ ಜೀವಿಸುತ್ತಿದ್ದನು. ಆತನಿಗೆ 25 ಸಂವತ್ಸರಗಳ ವಯಸ್ಸಿನಲ್ಲಿ ಒಂದು ದಿನ ಇಬ್ರಹೀಮ್ ಎಂಬ ಸ್ನೇಹಿತನು ರಷೀದ್‌ನನ್ನು ಕಾರಿನಲ್ಲಿ ಷಿಕಾರಿಗೆ ಕರೆದುಕೊಂಡು ಹೋಗಿದ್ದಾನೆ. ಇಬ್ರಹೀಮ್ ಸಮುದ್ರ ಪ್ರಾಂತ್ಯದಲ್ಲಿ ಕಾರನ್ನು ವೇಗವಾಗಿ ನಡೆಸುತ್ತಿರುವಾಗ, ಮಿಲಿಟರಿ ಬೀಚ್ ಎನ್ನುವ ಸ್ಥಳದಲ್ಲಿ ಕಾರು

ಹಿಡಿತ ತಪ್ಪಿ ಅಪಘಾತಕ್ಕೆ ಗುರಿಯಾಗಿದೆ. ಆಗ ರಷೀದ್ ಕಾರಿನಿಂದ ಹೊರಗೆ ಬಿದ್ದಿದ್ದಾನೆ. ಹಾಗೆ ಬಿದ್ದಾಗ ತಲೆಗೆ ಬಲವಾದ ಗಾಯವಾಗಿ ರಷೀದ್ ಅಲ್ಲಿಯೆ ಮರಣಿಸಿದ್ದಾನೆ. ರಷೀದ್ ಮರಣಿಸಿದ ನಂತರ ಒಂದು ಸಂವತ್ಸರಕ್ಕೆ "ಡಾನಿಯಲ್ ಜರ್ದೀ" ಎನ್ನುವಾತನು ಜನ್ಮಿಸಿದ್ದಾನೆ. ಡಾನಿಯಲ್ ಜರ್ದೀಗೆ ಮಾತುಗಳು ಬಂದಾಗ ಮಾತಾಡಿದ ಮೊದಲಮಾತು ಇಬ್ರಹೀಮ್. ಅಪಘಾತ ನಡೆದ ದಿನದಂದು ಕಾರುನಡೆಸಿದ ತನ್ನ ಸ್ನೇಹಿತನ ಹೆಸರು ಇಬ್ರಹೀಮ್. ಡಾನಿಯಲ್ ಜರ್ದೀ ಹಾಗೆ ಅನ್ನುವುದು ಯಾರಿಗೂ ಅರ್ಥವಾಗಲಿಲ್ಲ. ಇಬ್ರಹೀಮ್ ಎಂದು ಏಕೆ ಅನ್ನುತ್ತಾನೆಂದು ತಿಳಿಯಲಿಲ್ಲ. ನಂತರ ಎರಡು ವರ್ಷಗಳ ವಯಸ್ಸಿನಲ್ಲಿ ಡಾನಿಯಲ್ ಜರ್ದೀ, ತನ್ನ ತಾಯಿ "ಲತೀಷಾ"ಳೊಂದಿಗೆ ನಾನು ಮನೆಗೆ ಹೋಗಬೇಕು ಎನ್ನುತ್ತಾನೆ. ನಂತರ ಆರು ತಿಂಗಳುಗಳಿಗೆ, ಅಂದರೆ ಎರಡುವರೆ ಸಂವತ್ಸರಕ್ಕೆ ಇದು ನನ್ನ ಮನೆ ಅಲ್ಲ, ನೀನು ನನ್ನ ತಾಯಿಯಲ್ಲ. ನನಗೆ ತಂದೆ ಇಲ್ಲ, ನನ್ನ ತಂದೆ ಮರಣಿಸಿದ್ದಾನೆ ಎಂದು ಕೆಲವು ಮಾತುಗಳು ಮಾತನಾಡಿದನು. ಆಗಿನ ತನ್ನ ತಂದೆಯಾದ ಯೂಸಫ್‌ನನ್ನು ಅಪ್ಪ ಎಂದು ಕರೆಯದೆ ಯೂಸುಫ್ ಎಂದು ಹೆಸರಿಂದ ಕರೆಯುತ್ತಿದ್ದನು. ಅಷ್ಟೇ ಅಲ್ಲದೆ ತನ್ನ ತಂದೆ "ನಯೀಮ್" ಎಂದು ಹೇಳುತ್ತಿದ್ದನು. ನಯೀಮ್ ಎನ್ನುವುದು ರಷೀದ್ ತಂದೆಯ ಹೆಸರು.

ಡಾನಿಯಲ್ ಜರ್ದೀಗೆ ಎರಡೂವರೆ ಸಂವತ್ಸರಗಳ ವಯಸ್ಸಿನಲ್ಲಿಯೇ ಆತನ ಕುಟುಂಬವೆಲ್ಲಾ ಪಿಕ್ನಿಕ್‌ಗೆ ಹೋದಾಗ ಅವರಜೊತೆ ಜರ್ದೀ ಸಹ ಹೋಗಿದ್ದಾನೆ. ಆಗ ಅವರ ಬಂಧುಗಳಲ್ಲಿ ಒಬ್ಬರು ಪರ್ಮಟ್‌ಟಾ ಎನ್ನುವ ಹೆಸರನ್ನುತಪ್ಪಾಗಿ ಉಚ್ಚರಿಸಿದಾಗ, ಜರ್ದೀ ಸರಿಮಾಡಿ ಹೇಳುತ್ತಾನೆ. ಆಗ ಜರ್ದೀ ತಂದೆಯಾದ ಯೂಸಫ್ ಈ ಹೆಸರು ನಿನಗೇಗೆ ತಿಳಿದಿದೆ ಎಂದು ಕೇಳಿದಾಗ! ಈ ನಗರದ ಹೆಸರು ನನಗೆ ಚೆನ್ನಾಗಿ ಗೊತ್ತು, ಇದು ನಾನು ನಿವಾಸಿಸಿದ ನಗರವೆಂದು ಹೇಳುತ್ತಾನೆ. ಡಾನಿಯಲ್ ಜರ್ದೀ ಹೇಳಿದ ಮಾತುಗಳು ಆತನ ಕುಟುಂಬದವರಿಗೆ ಏನು ಅರ್ಥವಾಗಲಿಲ್ಲ. ನಂತರ ಸ್ವಲ್ಪಕಾಲಕ್ಕೆ ಡಾನಿಯಲ್ ಜರ್ದೀ, ತನ್ನ ತಾಯಿ ಕಾರಿನಲ್ಲಿ ಪ್ರಯಾಣಿಸುತ್ತಿರುವಾಗ, ಅವರ ಕಾರು ಮಿಲಿಟರಿ ಬೀಚ್ ಹತ್ತಿರಕ್ಕೆ ಬರುವಷ್ಟರಲ್ಲಿ ಆ ಪ್ರದೇಶವನ್ನು ನೋಡಿದ

ಡಾನಿಯಲ್ ಕಣ್ಣು ಮುಚ್ಚಿಕೊಂಡು, ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಅಳುವುದಕ್ಕೆ ಪ್ರಾರಂಭಿಸಿದ್ದಾನೆ. ನಂತರ "ನಾನು ಮರಣಿಸಿದ್ದು ಇಲ್ಲೆ" ಎಂದು ಜೋರಾಗಿ ಕಿರುಚುತ್ತಾನೆ. ಅಷ್ಟೇ ಅಲ್ಲದೆ ಗತ ಜನ್ಮದಲ್ಲಿ ತಾನು ಕಾರು ಮೆಕಾನಿಕ್ ಎಂದು, ನನ್ನ ಸ್ನೇಹಿತನು ಇಬ್ರಹೀಮ್ ಕಾರು ನಡೆಸುತ್ತಿರುವಾಗ ಕಾರು ಹಿಡಿತ ತಪ್ಪಿತ್ತೆಂದು, ಆಗ ಹೊರಬಿದ್ದ ನಾನು ತಲೆಗೆ ಗಾಯವಾಗಿ ಮರಣಿಸಿದ್ದೇನೆಂದು ಹೇಳಿದ್ದಾನೆ.

ಶಾಲೆಯಲ್ಲಿ ಡಾನಿಯಲ್ ಜರ್ದೀ ನರ್ಸರೀ ಓದುತ್ತಿರುವ ದಿನಗಳಲ್ಲಿ ತನ್ನ ಹೆಸರು ಡಾನಿಯಲ್ ಜರ್ದಿ ಅಲ್ಲ ಎಂದು, ರಷೀದ್ ಖಾದೀಜ್ ಎಂದು ಹೇಳಿದ್ದಾನೆ. ಅದೇ ಸ್ಕೂಲಿನಲ್ಲಿಯೇ ಮತ್ತೊಂದು ಸಂದರ್ಭದಲ್ಲಿ ಯುಕ್ತ ವಯಸ್ಸಿನಲ್ಲಿರುವ ಸುಂದರವಾದ ಲೇಡೀಟೀಚರ್‌ನನ್ನು ಚಿವುಟಿ ನೀನು ಬಹಳ ಸುಂದರವಾಗಿದ್ದೀಯ ಎಂದು ಹೇಳಿದ್ದನಂತೆ. ಆ ವಿಧವಾಗಿ ಮಾತುಗಳಲ್ಲಿಯು, ಕೈಗಳಲ್ಲಿಯು ಕೆಲವು ಸಂದರ್ಭಗಳಲ್ಲಿ ವಿಚಿತ್ರವಾಗಿ ಕಾಣಿಸುತ್ತಿರುವ ಡಾನಿಯಲ್, ಹೇಳುವುದು ಎಷ್ಟರ ಮಟ್ಟಿಗೆ ನಿಜವೆಂದು ತಿಳಿದುಕೊಳ್ಳುವುದಕ್ಕೆ ಆತನ ತಂದೆ ಯೂಸಫ್, ಪರ್‌ಮಟ್‌ಟಾ ಎಂಬ ಊರಿಗೆ ಹೋಗಿ ಡಾನಿಯಲ್ ವರ್ಣಿಸಿದ ವಿಧದಲ್ಲಿ ಕಾರು ಮೆಕಾನಿಕ್‌ನನ್ನು ಕುರಿತು, ಮಿಲಿಟರಿ ಬೀಚ್ ಹತ್ತಿರ ಆಕ್ಸಿಡೆಂಟ್‌ನ್ನು ಕುರಿತು ವಿಚಾರಿಸಿದಾಗ ಡಾನಿಯಲ್ ಹೇಳಿರುವುದೆಲ್ಲಾ ನಿಜವೆಂದು ತಿಳಿಯುತ್ತದೆ. ಈ ವಿಷಯವನ್ನು ತಿಳಿದುಕೊಂಡ ರಷೀದ್ ಖಾದೀಜ್‌ನ ಬಂಧುಗಳೂ, ಮಿತ್ರರೆಲ್ಲ ಡಾನಿಯಲ್‌ನನ್ನು ನೋಡುವುದಕ್ಕೆ ಹೊರಟು ಹೋಗುತ್ತಾರೆ. ಹಾಗೆ ಹೋಗಿದ್ದವರನ್ನು ನೋಡಿದ ಡಾನಿಯಲ್ ರಷೀದ್ ತಂಗಿ ನಜ್ಲಾನ್‌ಳನ್ನು ತಕ್ಷಣವೆ ಗುರುತಿಸಿ ಆಕೆಯನ್ನು ಹೆಸರಿನಿಂದಲೆ ಕರೆದಿದ್ದಾನೆ. ಮೊದಲು ತನ್ನ ಬಂಧುಗಳೆಲ್ಲರನ್ನು ನೋಡುತ್ತಲೆ ಡಾನಿಯಲ್ ತನ್ನ ತಾಯಿ ಲತಿಷಾಗೆ ಅವರೆಲ್ಲರಿಗು ಬಾಳೆಹಣ್ಣು ತಂದುಕೊಡಲು ಹೇಳುತ್ತಾನೆ. ಹಿಂದಿನ ಜನ್ಮದಲ್ಲಿ ರಷೀದ್‌ಗೆ ಬಾಳೆಹಣ್ಣೆಂದರೆ ಬಹಳ ಇಷ್ಟ. ರಷೀದ್ ಮರಣದ ನಂತರ ರಷೀದ್ ನೆನಪಿಗೆ ಬಾರದಂತಿರುವುದಕ್ಕೆ ರಷೀದ್‌ನ ತಾಯಿ ಆತನ ತಂಗಿ ಇಬ್ಬರು ಬಾಳೆಹಣ್ಣುಗಳನ್ನು ತಿನ್ನುವುದು ಬಿಟ್ಟಿರುತ್ತಾರೆ. ನಂತರ ಡಾನಿಯಲ್ ಪರ್‌ಮಟ್‌ಟಗೆ

ಹೋಗುತ್ತಲೆ ತನ್ನ ಸ್ನೇಹಿತನಾದ ಇಬ್ರಹೀಮ್‌ನನ್ನು ಮತ್ತೊಬ್ಬ ಸ್ನೇಹಿತನಾದ ಬಜಾಜ್‌ನನ್ನು ಗುರುತಿಸಿ ಮಾತನಾಡಿದ್ದಾನೆ.

ರಷೀದ್ ಕುಟುಂಬದವರೆಲ್ಲ ರಷೀದ್ ಮತ್ತೆ ಡಾನಿಯಲ್ ಜರ್ದೀ ಯಾಗಿ ಹುಟ್ಟಿದ್ದಾನೆಂದು ಅಂಗೀಕರಿಸಿದರು. ರಷೀದ್ ಕುಟುಂಬವು ಡಾನಿಯಲ್ ಫೋಟೊವನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡಿದ್ದಾರೆ. ರಷೀದ್ ತನ್ನ ಎರಡನೆ ಜನ್ಮದಲ್ಲಿ ಸಹ ಕಾರು ನಡೆಸಬೇಕೆಂದರೆ ಭಯಪಡುತ್ತಿದ್ದನು. ಈ ವಿಧವಾಗಿ ಕಾರು ನಡೆಸಬೇಕೆಂದರೆ ಬರುವ ಭಯವಾಗಲಿ, ಹಿಂದಿನ ಜನ್ಮ ಜ್ಞಾಪಕವಾಗಲಿ ಡಾನಿಯಲ್ ತಂದುಕೊಂಡರೆ ಬಂದಿರುವವಲ್ಲ. ಡಾನಿಯಲ್‌ಗೆ ಯಾವ ಸಂಬಂಧವಿಲ್ಲದೆ ಆತನ ಶರೀರದಲ್ಲಿರುವ ಆತ್ಮ ಮಾಡಿದ ಮೂರನೆ ಕೆಲಸವೆಂದು ನಾವು ಗುರುತಿಸಬಹುದು. ಮನುಷ್ಯ ಸತ್ತುಹೋದರೆ ಮತ್ತೆ ಜನ್ಮಿಸುತ್ತಾನೆಂದು ಮನುಷ್ಯರಿಗೆ ತಿಳಿಸುವುದಕ್ಕೆ ಆತ್ಮ ಮಾಡಿದ ಕೆಲಸವೆಂದು ನಾವು ಹೇಳಿ ಕೊಳ್ಳಬಹುದು. ಪ್ರತಿ ಮನುಷ್ಯನಲ್ಲಿ ಜೀವಾತ್ಮಗೆ ಜೊತೆಯಾಗಿ ಆತ್ಮ ನಿವಾಸಿಸುತ್ತಾ ಎಲ್ಲೋ ಒಂದುಕಡೆ ಈ ವಿಧವಾದ ಜ್ಞಾಪಕವನ್ನು ತರಿಸಿರುವ ಸಂಘಟನೆಗಳೆ ಪುನರ್ಜನ್ಮ ವೃತ್ತಾಂತಗಳು. ಪುನರ್ಜನ್ಮಗಳು ಇಲ್ಲ ಎನ್ನುವವರ ವಾದ ಸುಳ್ಳೆಂದು, ಇವೆಯೆನ್ನುವುದು ಶಾಸ್ತ್ರಬದ್ಧವೆಂದು ಆತ್ಮ ತಿಳಿಸಿದ ಇಂತಹ ಸಂಘಟನೆಗಳಿಂದ ತಿಳಿಯುತ್ತಿದೆ.

ಪುನರ್ಜನ್ಮಗಳು ಸತ್ಯಗಳೆಂದು ತಿಳಿದಾಗ ಭಗವದ್ಗೀತೆಯಲ್ಲಿ ದೇವರು ಹೇಳಿದ ಮಾತು ನಿಜವಾದುದೆಂದು ಅರ್ಥವಾಗಬಲ್ಲದು. ಹೀಗೆ ದೇವರು ತನ್ನ ಜ್ಞಾನ ಸತ್ಯವಾದುದೆಂದು ಕೆಲವು ಸಂಘಟನೆಗಳಿಂದ ತಿಳಿಸಿದ್ದಾನೆ. ಮನುಷ್ಯನಿಗೆ ತಿಳಿದಿರುವುದು ಯಾವುದಾದರೇ ನಿರೂಪಣೆಗೆ ಬರುವುದಿಲ್ಲವೋ, ಅದು ದೇವರ ಜ್ಞಾನ ಅಲ್ಲವೆಂದು ತಿಳಿಯಬೇಕು. ಪ್ರತ್ಯಕ್ಷವಾಗಿ ಕಾಣಿಸುವುದು ದೇವರ ಜ್ಞಾನವೆಂದು ಒಪ್ಪಿಕೊಳ್ಳದೆ ಹೋದರೆ ಅವನು ಸತ್ಯವನ್ನು ಒಪ್ಪಿಕೊಳ್ಳದಂತೆ ಯಾಗುತ್ತದೆ. **ಸತ್ಯವನ್ನು ಒಪ್ಪಿಕೊಳ್ಳದವನು ನಾನು ಜ್ಞಾನಿ ಎಂದು ದೇವರನ್ನು ಎಷ್ಟು ಬಾರಿ ಪ್ರಾರ್ಥನೆ ಮಾಡಿದರೂ ದೇವರು ಅವನ ಕಡೆ ನೋಡುವುದಿಲ್ಲ.**

ಯಾರಾದರೂ "ನಾನು ದೊಡ್ಡ ಜ್ಞಾನಿ, ನನಗೆ ನಮ್ಮ ಗ್ರಂಥದಲ್ಲಿನ ಜ್ಞಾನ ತಿಳಿದಿದೆ, ನನ್ನೊಂದಿಗೆ ಸಮಾನ ಜ್ಞಾನಿ ಭೂಮಿಮೇಲೆ ಯಾರೂ ಇಲ್ಲ" ಎಂದು ಅಂದುಕೊಳ್ಳಬಹುದು. ಹಾಗೆ ಅಂದುಕೊಳ್ಳುವವರನ್ನು ಯಾರೂ ಬೇಡವೆನ್ನುವುದಿಲ್ಲ. ಅವನ ಬಾಯಿಗೆ ಬರಲಾರದೆ ಕೆಲವರು ಅವನನ್ನೇ ದೊಡ್ಡ ಜ್ಞಾನಿಯಾಗಿ ಪ್ರಕಟಿಸಿದರೂ ಬೇರೆ ಪ್ರಜೆಗಳಿಗೆ ದೈವಿಕವಾಗಿ ಬರುವ ನಷ್ಟ ಏನೂ ಇಲ್ಲ. ಹಾಗೆಯೇ ದೈವಿಕವಾಗಿ ಏನೂ ಲಾಭ ಇರುವುದಿಲ್ಲ. ಅವನಿಗೆ ಲಾಭ ಇಲ್ಲದೆ ಹೋಗಿ ದೈವಿಕವಾದ ನಷ್ಟವೇ ಇರುತ್ತದೆ. ಅನವಶ್ಯಕವಾದ ಕಡೆ ಪಾಪವನ್ನು ಮೂಟೆಕಟ್ಟಿಕೊಳ್ಳಬೇಕಾಗಿ ಬರುತ್ತದೆ. ಜ್ಞಾನಿ ಎಂದು ಅಂದುಕೊಳ್ಳುವ ವನಿಗೆ ಅವನನ್ನು ನೋಡಿ ಕರ್ಮಗಳು ದೂರವಾಗಿ ಹೋಗಬೇಕೇ ಹೊರತು, ಪಾಪಗಳು ಬರುವುದೇನು? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ಅವನು ತನ್ನನ್ನು ತಾನು ಜ್ಞಾನಿ ಎಂದು ಕೊಂಡಿದ್ದಾನೆ, ಅವನಿಗೆ ಜೊತೆಯಾಗಿ ಉಳಿದ ಸ್ವಲ್ಪ ಜನರು ಕೂಡಾ ಆತನನ್ನು ದೊಡ್ಡ ಜ್ಞಾನಿಯೆಂದು ಕರೆದಿರಬಹುದು. ಆದರೇ ಅವನನ್ನು ಜ್ಞಾನಿ ಎಂದು ದೇವರು ಒಪ್ಪಿಕೊಳ್ಳಲಿಲ್ಲ ಅಲ್ಲವೆ! ಆದ್ದರಿಂದ ಅವನು ದೇವರ ಲೆಕ್ಕದಲ್ಲಿ ಅಜ್ಞಾನಿಯೇ. ಅಂತಹವನಿಗೆ ಸರ್ವಸಾಧಾರಣವಾಗಿ ಎಲ್ಲರಿಗೂ ಬಂದಂತೇ ಪಾಪಗಳು ಬರುತ್ತವೆ. ಆತನಲ್ಲಿ ಯಾವ ಪ್ರತ್ಯೇಕತೆ ಇರುವುದಿಲ್ಲ, ದೈವಿಕವಾಗಿ ಆತನು ಜ್ಞಾನಿಯೇ ಅಲ್ಲ. ಆತನ ಪ್ರತಿಷ್ಟೆ, ಬಿರುದುಗಳು ಎಲ್ಲವೂ ಇಹಲೋಕಕ್ಕೇ ಪರಿಮಿತಿ, ಪರಲೋಕಕ್ಕೆ ಯಾವ ಕೆಲಸಕ್ಕೆ ಬರುವುದಿಲ್ಲ.

ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ **'ಜ್ಞಾನಾಗ್ನಿಯೊಂದಿಗೆ ಕರ್ಮ ಸುಟ್ಟುಹೋಗುತ್ತದೆ"** ಎಂದು ಹೇಳಿದ್ದಾನೆ, ಎರಡನೆ ದೈವಗ್ರಂಥದಲ್ಲಿ **'ಪಾಪಕ್ಷಮಾಪಣೆ ಇದೆ"** ಎಂದು ಇದೆ. ಮೂರನೆ ಕೊನೆಯ ದೈವಗ್ರಂಥದಲ್ಲಿ **'ದೇವರು ಕ್ಷಮಾಶೀಲನು'** ಎಂದು ಇದೆ. ಮೂರರಲ್ಲಿ ಪಾಪವನ್ನು ಇಲ್ಲದಂತೆ ಅನುಭವಿಸದಂತೆ ತಪ್ಪಿಸಿಕೊಳ್ಳುವ ವಿಧಾನ ಹೇಳಲಾಗಿದೆ. ಹೇಗೆ ಹೇಳಿದರೂ ಜ್ಞಾನವಿರುವಾಗಲೇ ಇವೆಲ್ಲಾ ನಡೆಯುತ್ತವೆ. ಈದಿನ ಯಾರು ನಿಜವಾದ ಜ್ಞಾನಿ

ಆದರೇ, ದೇವರ ಧರ್ಮಗಳನ್ನು ಅವನು ತಿಳಿದು ಆಚರಿಸುವುದಾದರೇ ಅಂತಹ ಹಿಂದುವು ಪಾಪವನ್ನು ಸುಡುವ **"ಜ್ಞಾನಾಗ್ನಿ"**ಯನ್ನು ಹೊಂದಿರುತ್ತಾನೆ. ಆತನು ಕ್ರೈಸ್ತನಾದರೇ ಪಾಪವನ್ನು ತೊಳೆಯುವ **"ನಿಬಂಧನ ರಕ್ತವನ್ನು (ಜ್ಞಾನಶಕ್ತಿ)"** ಯನ್ನು ಹೊಂದಿರುತ್ತಾನೆ. ಆತನನ್ನು ದೇವರು ಮುಸ್ಲಿಮ್ ಆಗಿ ಹುಟ್ಟಿಸಿದ್ದರೇ ಅಂದರೇ ಆತನು ಮುಸ್ಲಿಮ್ ಆದರೆ ಕ್ಷಮಾಶೀಲನಾಗಿ **"ಪಾಪವನ್ನು ಕ್ಷಮಿಸುವ ಸಾಮರ್ಥ್ಯ"** ಹೊಂದಿರುತ್ತಾನೆ. ಈ ವಿಷಯ ಮೂರು ದೈವ ಗ್ರಂಥಗಳಲ್ಲಿ ಹೇಳಿರುವ ಜ್ಞಾನವೇಯೆಂದು ಮರೆಯಬಾರದು.

ಯೇಸು ತನ್ನ ನಿಬಂಧನೆ ರಕ್ತದಿಂದ ಪಾಪಗಳು ತೊಳೆದುಹಾಕುವನೆಂದು ಬೈಬಲ್ ಗ್ರಂಥದಲ್ಲಿ ಹೇಳಿದ್ದಾನೆ. ಆ ಮಾತು ಸತ್ಯಸಮೇತವಾಗಿ ಇದೆಯೆಂದು ನಿರೂಪಿಸುವುದಕ್ಕೆ ಆತನ ಜೀವನದಲ್ಲಿ ಎಷ್ಟೋ ಜನರ ಪಾಪಗಳನ್ನು ಸಂಕಲ್ಪದಿಂದಲೇ ತೊಳೆದುಹಾಕಿ ಮನುಷ್ಯರ ಪಾಪಗಳಿಂದ ರಕ್ಷಣೆ ಕಲ್ಪಿಸಿದ್ದಾನೆ. ಕುಷ್ಠರೋಗಿಯನ್ನು, ಕುರುಡನನ್ನು ಗುಣಪಡಿಸಿ ತನ್ನ ಜ್ಞಾನಕ್ಕೆ ಇಷ್ಟು ಶಕ್ತಿಇದೆಯೆಂದು ನಿರೂಪಿಸಿದ್ದಾನೆ. ಈದಿನ ಎಲ್ಲರಿಗೂ ಪ್ರತ್ಯಕ್ಷ ಪ್ರಮಾಣವಾಗಿ ದೇವರ ಜ್ಞಾನ ಇಷ್ಟು ದೊಡ್ಡದೆಂದು, ಜ್ಞಾನ ಅಗ್ನಿಯೊಂದಿಗೆ ಸಮಾನವಾಗಿ ಇದೆಯೆಂದು, ಅದು ಯಾವ ಪಾಪವನ್ನಾದರೂ ಸುಟ್ಟುಹಾಕಬಲ್ಲದೆಂದು ನಿರೂಪಿಸುವ ಸಂಘಟನೆಗಳು ನಮ್ಮ ಹತ್ತಿರ ಎಷ್ಟೋ ನಡೆದಿವೆ. ದೊಡ್ಡ ಪಾಪಗಳಾದ H.I.V ರೋಗ (ಎಯಿಡ್ಸ್ ರೋಗ), ಕ್ಯಾನ್ಸರ್ ರೋಗ, ಡೆಂಗೀ ಜ್ವರ ಮುಂತಾದ ಅನೇಕ ರೋಗಗಳು ನಮ್ಮ ಹತ್ತಿರಕ್ಕೆ ಬಂದು ನಮ್ಮ ಜ್ಞಾನವನ್ನು ನಂಬಿದವರಿಗೆಲ್ಲರಿಗೂ ಅವರಿಂದ ದೂರವಾಗಿ ಹೋಗುವುದು ನಡೆದಿದೆ. ಅಂತಹ ಮೇಲು ನಮ್ಮಿಂದ ಹೊಂದಿದವರು ನೂರಾರು ಮಂದಿ ಇದ್ದಾರೆ.

ಈ ದಿನ ಮೂರು ಮತಗಳಲ್ಲಿ ದೇವರ ಮೇಲೆ ಹೆಚ್ಚಿನ ವಿಶ್ವಾಸ ಇರುವವರು ಮುಸ್ಲಿಮ್‌ರೇ ಎಂದು ಹೇಳಬಹುದು. ದೇವರ ಮೇಲೆ ವಿಶ್ವಾಸದಲ್ಲಿ ಅವರಿಗೇ ಮೊದಲ ಸ್ಥಾನವೆಂದು ಅಸೂಯೆಪಡದಂತೆ ಹೇಳಬಹುದು. ಆದರೇ ದೇವರ ಜ್ಞಾನದ ಮೇಲೆ ಶ್ರದ್ಧೆಯಲ್ಲಿ ಪೂರ್ತಿ ಹಿಂದುಳಿದವರು ಮುಸ್ಲಿಮ್‌ರೇ

ಎಂದು ಹೇಳಬಹುದು. ದೇವರ ಜ್ಞಾನದ ಮೇಲೆ ಶ್ರದ್ಧೆ ಇಲ್ಲದವರಲ್ಲಿ ಮೊದಲ ಸ್ಥಾನ ಅವರದೇಯೆಂದು ಹೇಳಬಹುದು. ಹಾಗೆಯೇ ಪ್ರಪಂಚದಲ್ಲಿ ದೇವರಿ ಗೋಸ್ಕರ ಪ್ರಾರ್ಥನೆ ಮಾಡುವವರಲ್ಲಿ ಮುಖ್ಯರು ಮುಸ್ಲಿಮ್‌ರೇಯೆಂದು ಹೇಳಬಹುದು. ಪ್ರಪಂಚದಲ್ಲಿ ಅತ್ಯವಶ್ಯಕ ಕೆಲಸಗಳು ಎಷ್ಟಿದ್ದರೂ ಅವುಗಳನ್ನು ಬಿಟ್ಟು ದೇವರ ಪ್ರಾರ್ಥನೆಗೆ ಪ್ರಾಧಾನ್ಯತೆ ಕೊಟ್ಟು ಪ್ರಾರ್ಥನೆ ಮಾಡುವವರಲ್ಲಿ ಮೊದಲ ಸ್ಥಾನ ಮುಸ್ಲಿಮ್‌ರದೇಯೆಂದು ಹೇಳಬಹುದು. ಉಳಿದ ಮತಗಳಲ್ಲಿ ಇಲ್ಲದ ಎಷ್ಟೋ ಒಳ್ಳೆಯ ಆಚರಣೆಗಳಿದ್ದರೂ, ದೇವರ ವಿಷಯದಲ್ಲಿ ಎಷ್ಟೋ ತಾಳ್ಮೆ ಇರುವವರಾಗಿದ್ದರೂ ಅವರಲ್ಲಿ ಒಂದೇ ಒಂದು ಲೋಪವಿದೆ. ದೇವರು ಹೇಳಿದ **"ಜ್ಞಾನಶಕ್ತಿ"** ಅವರಲ್ಲಿ ಇಲ್ಲ. ದೇವರು ಹೇಳಿದ **"ನಿಬಂಧನೆ ಜ್ಞಾನ"** ಅವರಲ್ಲಿ ಇಲ್ಲ. ಅಲ್ಲಾಹ್ ಖುರಾನ್ ಗ್ರಂಥದಲ್ಲಿ ಹೇಳಿದ ಪಾಪಗಳನ್ನು ಇಲ್ಲದಂತೆ ಮಾಡುವ **"ಪಾಪಕ್ಷಮಾಶೀಲತೆ"** ಅವರಲ್ಲಿ ಇಲ್ಲ. ಅವರು ಯಾರ ಕರ್ಮವನ್ನು ಸುಡಲಾರರು. ಅವರ ಕರ್ಮವನ್ನು ಅವರು ಸುಟ್ಟುಕೊಳ್ಳಲಾರರು. ನಮ್ಮ ಹತ್ತಿರ ಶಕ್ತಿವಂತವಾದ ಜ್ಞಾನವಿದೆಯೆಂದು ಯಾರ ಪಾಪವನ್ನು ಪ್ರತ್ಯಕ್ಷವಾಗಿ ಇಲ್ಲದಂತೆ ಮಾಡಲಾರರು. ನನ್ನ ಜ್ಞಾನವನ್ನು ಸತ್ಯ ಸಮೇತವಾಗಿ ಸತ್ಯಬದ್ಧವಾಗಿ ನಿಮಗೆ ಕೊಟ್ಟಿದ್ದೇನೆಂದು ದೇವರು ಖುರಾನ್ ಗ್ರಂಥದಲ್ಲಿ ಹೇಳಿದರೂ, ಆ ಸತ್ಯ ಬದ್ಧತೆಯನ್ನು ತಮ್ಮ ಜೀವನಗಳಲ್ಲಿ ತಂದುಕೊಳ್ಳಲಾರದೆ ಹೋಗಿದ್ದಾರೆ.

ಎಷ್ಟೋ ಜ್ಞಾಪಕಶಕ್ತಿ, ಎಷ್ಟೋ ಮೇಧಾಶಕ್ತಿ ಮುಸ್ಲಿಮ್‌ರಲ್ಲಿ ದೇವರು ತುಂಬಿ ಇಟ್ಟಿದ್ದಾನೆ. ಆ ಮೇಧಾಶಕ್ತಿಯನ್ನು, ಜ್ಞಾಪಕಶಕ್ತಿಯನ್ನು ದೇವರ ಜ್ಞಾನದ ಮೇಲೆ ಶ್ರದ್ಧೆಯಾಗಿ ಬದಲಾಯಿಸಿಕೊಳ್ಳುವುದಾದರೇ, 'ನಮಗೆ ಎಲ್ಲಾ ತಿಳಿದಿದೆ' ಎಂದು ಗೋಡೆಯನ್ನು ಬೀಳಿಸಿ ನಾವು ಇನ್ನೂ ತಿಳಿದುಕೊಳ್ಳಬೇಕೆನ್ನುವ ಆಲೋಚನೆಯೊಳಗೆ ಬಂದರೇ, ಅವರು ದೇವರು ಹೇಳಿದ ಕ್ಷಮಾಶೀಲನು ಆಗಬಲ್ಲರು. ಆಗ ದೇವರ ಲಕ್ಷಣಗಳು, ದೇವರ ಜ್ಞಾನ ಅವರೊಳಗೆ ಹರಡುತ್ತದೆ. ಆಗ ಅವರ ಪಾಪದಿಂದ ಅವರು ಹೊರಬೀಳುವುದೇ ಅಲ್ಲದೆ, ಅವರು ಕ್ಷಮಾಶೀಲರಾಗಿ ಇತರೆ ಪಾಪಗಳನ್ನು ಕೂಡಾ ಕ್ಷಮಿಸಬಲ್ಲರು. ಆಗ ಮುಸ್ಲಿಮ್‌ರು ಸಂಪೂರ್ಣ ಜ್ಞಾನಿಗಳೆಂದು ಪ್ರಪಂಚಕ್ಕೆ ತಿಳಿಯಬಲ್ಲದು. **ನಾವು ಹೇಳಿರುವುದು**

ಅಸೂಯೆಯಿಂದಲ್ಲ ಪ್ರೇಮದಿಂದ ಎಂದು ತಿಳಿದು ನಮ್ಮ ಮಾತನ್ನು ಅನುಸರಿಸಿರಿ. ನೀವು ಜ್ಞಾನಶಕ್ತಿ ಇರುವವರಾಗಿ. ಕರ್ಮವನ್ನು ದಹಿಸಿರಿ.

ಇಂತಿ

**ಯೋಗೀಶ್ವರ್**

ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕು ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.

ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,
ಸತ್ಯವನ್ನು ಸಾವಿರಮಂದಿ ಅಲ್ಲಗಳೆದರೂ ಅದು ಅಸತ್ಯವಲ್ಲ.

ಆಧಾರವಿರುವ ಪ್ರತಿಯೊಂದೂ ಸತ್ಯವಲ್ಲ,
ಆಧಾರವಿಲ್ಲದ್ದು ಪ್ರತಿಯೊಂದೂ ಅಸತ್ಯವಲ್ಲ.

1. ತಿಳಿಯದ ಆಕಾಶ ಒಂದಾಗಿದ್ದು
   ತಿಳಿಯುವ ಸೂರ್ಯ, ಚಂದ್ರ,
   ನಕ್ಷತ್ರಗಳು ಮೂರು (ತ್ರೈತ) ಇವೆ.
2. ತಿಳಿಯದ ಕಾಲ ಒಂದಾಗಿದ್ದು
   ತಿಳಿಯುವ ದಿನ, ಮಾಸ, ಸಂವತ್ಸರ
   ಮೂರು (ತ್ರೈತ) ಇವೆ.
3. ತಿಳಿಯದ ಪರಮಾತ್ಮ ಒಂದಾಗಿದ್ದು
   ತಿಳಿಯುವ ಅಂಡಜ, ಪಿಂಡಜ,
   ಉದ್ಭಿಜ ಮೂರು (ತ್ರೈತ) ಇವೆ.

# ಯಾವುದು ನಿಜವಾದ ಜ್ಞಾನ?

ಇದು ನಿಜವಾದ ಜ್ಞಾನ

ಇದು ನಿಬಂಧನೆ ಜ್ಞಾನ

ಇದು ಮತಾತೀತ ಜ್ಞಾನ

ಇದು ಆಚರಣ ಜ್ಞಾನ

ಇದು ದೇವರ ಜ್ಞಾನ

ಇದು ಶಾಸ್ತ್ರೀಯ ಜ್ಞಾನ

Author :

The Only GURU of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**

www.thraithashakam.org